

ಮನವೆನ್ನ ಮಾತು ಕೇಳದು ಮಂದಜ್ಞಾನದಿ
ತನುವಿವಾಸೆಯು ಬಿಡಲೊಲ್ಲದು ||ಪ||

ದೇಹಸಂಬಂಧಿಗಳಾದ್ಯೈವರ್ಶೈವರು
ಮೋಹಪಾಶದಿ ಕಟ್ಟಿ ಬಿಗಿದಿಹರಯ್ಯ
ದೇಹವನಿತ್ಯವೆಂಬುದ ಗುರುತರಿಯದೆ
ಮಾಯಾ ಪ್ರಪಂಚವೆಂಬುದು ಬದ್ಧವಾಗಿದೆ ||೧||

ಸಾದು ಸಜ್ಜನರ ಸಂಗವ ಮಾಡಿ ಪರಗತಿಗೆ
ಆದಾರವನು ಮಾಡಲೊಲ್ಲದಯ್ಯ
ಕ್ರೋಧ ಕುಹಕ ದುಷ್ಟರೊಡನಾಡಿ ಕಾಲನ
ಬಾಧೆಗೆ ಗುರಿಯ ಮಾಡುತಿಲಿದೆ ಹರಿಯೆ ||೨||

ಮದಗಜ ಮೈಯ ಮರೆತು ಮುಂದುಗಾಣದೆ
ಕದುವಿನೊಳಗೆ ಬಿದ್ದಂತಾಯಿತಯ್ಯ
ಹೃದಯಕಮಲದಲ್ಲಿ ನಿಂತು ರಕ್ಷಿಸೊ ಎನ್ನ
ಪದುಮಾಕ್ಷವರದ ಶ್ರೀ ಪುರಂದರ ವಿಠಲ ||೩||

---ಶ್ರೀ ಪುರಂದರದಾಸರು.

ಸಂದರ್ಶಿಸಿ.

ಆನಂದಿಸಿ.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.





# ವಾರ್ಷಿಕ ಬ್ರಹ್ಮೋತ್ಸವಗಳು

4--6--92 ರಿಂದ 13--6--92

**ಕಾರ್ಯಕ್ರಮ ವಿವರ**

| ದಿನಾಂಕ | ವಾರ | ಹಗಲು | ಸಂಜೆ |
|---|---|---|---|
| 4--6--92 | ಗುರುವಾರ | ---- | ಸೇನಾಪತಿ ಉತ್ಸವ |
| 5--6--92 | ಶುಕ್ರವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ |
| 6--6--92 | ಶನಿವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 7--6--92 | ಭಾನುವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 8--6--92 | ಸೋಮವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 9--6--92 | ಮಂಗಳವಾರ | ಮೋಹಿನೀ ಅವತಾರ | ಗರುಡವಾಹನ |
| 10--6--92 | ಬುಧವಾರ | ಹನುಮಂತ ವಾಹನ<br>ಸಂಜೆ -- ವಸಂತೋತ್ಸವ | <br>ಗಜವಾಹನ |
| 11--6--92 | ಗುರುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 12--6--92 | ಶುಕ್ರವಾರ | ರಥೋತ್ಸವ | ಅಶ್ವವಾಹನ |
| 13--6--92 | ಶನಿವಾರ | ಚಕ್ರಸ್ನಾನ | ಧ್ವಜಾವರೋಹಣ |

ಸೂಚನೆ ಶ್ರೀ ಗೋವಿಂದರಾಜಸ್ವಾಮಿ ದೇವಾಲಯ ತಿರುಪತಿಯ ರೈಲ್ವೆ ನಿಲ್ದಾಣ ಬಸ್ ನಿಲ್ದಾಣಗಳ ಬಳಿಯಲ್ಲಿದೆ ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳುಂಟು

ನೀವೂ ಬನಿ          ತಿ. ತಿ. ದೇ.          ನಿಮ್ಮವರನ್ನೂ ಕರೆತನ್ನಿ



ಸಂಪುಟ ೨೨] ಮೇ ೧೯೯೨ [ಸಂಚಿಕೆ ೧೨

# ವಿಷಯಸೂಚಿ



ಮುಖಚಿತ್ರ ವೀರಾಂಜನೇಯ -- ಚಿತ್ರ ಕೆ ಜಗದೀಶ್
ಹಿಂಬದಿಯಲ್ಲಿ ಸಾವನದುರ್ಗದ ಶ್ರೀ ನರಸಿಂಹಸ್ವಾಮಿ ದೇವಾಲಯ
ಒಳಗಡೆ -(1)ಅನ್ನಮಾಚಾರ್ಯ
(2)ನಾರಾಯಣವನಂ ಬ್ರಹ್ಮೋತ್ಸವದಲ್ಲಿ ಊಂಜಲ್‌ಸೇವೆ


ಗೌರವ ಸಂಪಾದಕರು
ಶ್ರೀ ಎಂ ವಿ ಎಸ್ ಪ್ರಸಾದ್, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ
ತಿ ತಿ.ದೇ., ತಿರುಪತಿ

ಸಂಪಾದಕ
ಕೆ ಸುಬ್ಬಾರಾವ್ರು ಎಂ.ಎ.

ಉಪಸಂಪಾದಕ
ಬಿ ಎನ್ ಶ್ರೀನಿವಾಸನ್ ಎಂ ಎ.,

ಮುದ್ರಣ
ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೧--೦೦**
**ವಾರ್ಷಿಕ ಚಂದಾ ೧೨--೦೦**




ವಾಲ್ಮೀಕಿ ರಾಮಾಯಣದ ಪಾತ್ರಗಳಲ್ಲಿ ಪ್ರಮುಖವಾದವುಗಳಲ್ಲಿ ಅಂಜನಾಸುತ ಆದಂತಹ ಆಂಜನೇಯನದೂ ಒಂದು ಆಂಜನೇಯ ಎಂದರು ತಾಯಿಯ ನೆನಪಿನಲ್ಲಿ, ಮಾರುತಿ ಎಂದರು ತಂದೆಯ ಹಿನ್ನೆಲೆಯಲ್ಲಿ, ಹನುಮಂತ ಎಂದರು ದವಡೆಯ ಗುರುತಿನಲ್ಲಿ ಅವನಿಗೆ ಹೆಸರಾದರೂ ಏನು? ಇಟ್ಟವರಾದರೂ ಯಾರು? ಬ್ರಹ್ಮಚಾರಿಯಾಗಿ, ವಿದ್ವಾಂಸನಾಗಿ ಚಿರಂಜೀವಿಯಾಗಿ ಪರಂಪರೆಯಿಂದ ಗುರುತಿಸಲ್ಪಟ್ಟಿರುವ ಆತನ ಜೀವನೋದ್ಧೇಶ ರಾಮ ತೃಪ್ತಿ ರಾಮಬಂಟನಾಗಿಯೇ ಬದುಕು ಸಾಗಿಸುವ ಸಾರ್ಥಕತೆ ಪಡೆವ ಬಯಕೆ ಅವನದು ಅವನ ಬದುಕೂ ಆದರ್ಶವೂ ಜನಕ್ಕೆ ಪರಂಪರೆಯಿಂದ ಪ್ರಿಯವಾಗಿರಬೇಕು ಎಂತಲೇ ಭಾರತಾದ್ಯಂತ ಅವನ ಗುಡಿಗಳಿವೆ ವ್ಯಾಸರಾಯರಂತೂ ತಾವು ಹೋದಲೆಲ್ಲ ಅವನ ಪ್ರತಿಮೆಗಳನ್ನು ನಿಲ್ಲಿಸಿ ಪೂಜಿಸಿ ಅವನ ಆದರ್ಶದ ವಿದ್ವತ್ತೆಯ ಸಂದೇಶವನ್ನು ಹರಡಿ ನಡೆದರು

ಇಷ್ಟಾಗಿ ಹನುಮಂತ ದರ್ಶನ ರಾಮಾಯಣದಲ್ಲಿ ನಮಗಾಗುವುದು ಅರ್ಧ ಅಯನವಾದಮೇಲೆ ರಾಮನ ಅರಣ್ಯಗಮನದ ನಂತರ ಸೀತಾಪಹರಣವಾದ ಮೇಲೆಯೇ ಹನುಮತ್ಪ್ರವೇಶ ಆದರೂ ಇಡಿಯಾಗಿ ದೃಶ್ಯವನ್ನೆಲ್ಲ ತುಂಬಿ ನಿಲ್ಲುವ ವ್ಯಕ್ತಿತ್ವ, ಎಂತಲೇ ಅವನ ಸಾಹಸೋದ್ಯಮಕ್ಕೆ ಸೀಮಿತವಾದ ಒಂದು ಕಾಂಡಕ್ಕೆ ಅವನದೇ ಹೆಸರು (ಅವನನ್ನು ಸುಂದರ ಎಂದೂ ಕರೆಯುವುದುಂಟು) ಸೀತಾಶೋಕ ನಾಶನನೂ ಲಂಕಾನ್ವೇಷಕನೂ, ಅಕ್ಷಹಂತಾರನೂ ಅವ ಏನಲ್ಲ ಅಲ್ಲಿ ರಾವಣನಿಗ ದರ್ಮವನ್ನು ಕುರಿತು ಹೇಳುವಲ್ಲಿಯೂ, ಇತ್ತ ಸೀತೆಗೆ ಸಮಾಧಾನ ಸ್ವಾಂತನ ಹೇಳುವುದರಲ್ಲಿಯೂ, ರಾಮನಿಗೆ ಸೀತೆಯ ಸುದ್ದಿ ಕೊಡುವಲ್ಲಿಯೂ ಅವನಿಗೆ ಅವನೇ ಸಾಟಿ ರಾಮ ರಾವಣ ಯುದ್ಧಕ್ಕ ಹೋಲಿಕೆ ಇಲ್ಲವಂತೆ ಹನುಮಂತನ ಸಾಹಸಕ್ಕೆ ಹೋಲಿಕೆ ಇದೆಯೇನು? ಕಡೆಗೆ ಸೀತೆಯನ್ನು ಎತ್ತಿಕೊಂಡು ಸಮುದ್ರವನ್ನು ದಾಟುವೆ ಎಂಬ ಸಾಹಸದ ಆತುರ ("ವಾಕ್ಕೋವಿದಂ ಹನುಮನಂಗನೆಯ ಇಂಗಿತವನರಿಯದಾದನನೆ ಬ್ರಹ್ಮಚರ್ಯಕೆ ಗರಿಮೆಯ್ಯೆಸೆ" ಎನ್ನುತ್ತಾರೆ ಋಷಿಕವಿಕುವೆಂಪು) ಮಂಡೋದರಿಯ ಶಯ್ಯಾಗೃಹದಲ್ಲೂ ಇಂತಹದೇ ಆತುರದ ಅನುಮಾನ ಕಂಡುಬರಬಹುದಾದರೂ ಇಲ್ಲೆಲ್ಲ ಮನುಷ್ಯ ಸಹಜ ಅವಸರದ ಕ್ರಿಯೆಗಳನ್ನೇ ಗುರುತಿಸುವಂತಾಗಿ ಅವನ ವ್ಯಕ್ತಿತ್ವ ಪುಟಗೊಳ್ಳುತ್ತದೆ ಅವನ ತೂಕದ ಮಾತಿನ ಗಟ್ಟಿತನವನ್ನು ವಿಭೀಷಣ ಶರಣಾಗತಿ ಸಂದರ್ಭದಲ್ಲಿ ಕಾಣಬಹುದು

ಅನ್ಯವನ್ನು ಕುರಿತು ಆಲೋಚಿಸದೆ ಅನುಕ್ಷಣವೂ ರಾಮಸೇವೆಯಲ್ಲಿಯೇ ಜೀವನವನ್ನು ಮುಡಿಪಿಟ್ಟು ನಡೆದ ಮನುಷ್ಯ ತನ್ನ ಇತರ ಧರ್ಮಗಳನ್ನು ಹೀಗೆ ನಿರ್ವಹಿಸಿದ ಎಂಬುದು ಆತನ ವಿಷಯದಲ್ಲಿ ಪ್ರಶ್ನೆಯಾಗದು ಅವನಿಗೆ ತಾನು ಸುಗ್ರೀವನ ಸೇವಕ ಎಂಬುದೂ ತಿಳಿದಿದೆ ಸುಗ್ರೀವನೂ ರಾಮ ಸೇವೆಯಲ್ಲಿಯೇ ತತ್ಪರನಾಗಿದ್ದದ್ದರಿಂದ ಒಳಭೇದವುಂಟಾಗಲಿಲ್ಲವೆನ್ನಬೇಕು

ಮನುಷ್ಯ ಸಹಜ ಸ್ವಭಾವ, ಮನುಷ್ಯ ಎಂದೆಲ್ಲ ಹಿಂದೆ ಆತನ ವ್ಯಕ್ತಿತ್ವದ ಹಿರಿಮೆ ಗರಿಮೆಗಳನ್ನುದ್ಘಾಡಿಸಲು ಬಳಸಾಲಾಗಿದೆ ಆತ ಕಪಿಯಲ್ಲವೇ ಎಂಬುದು ಮುಖ್ಯ, ಕಪಿಧ್ವಜನೂ ಹೌದೆಂಬುದು ಅಭಿಪ್ರಾಯ ಕಪಿಯೇ ಆದರೂ ಸುಸಂಸ್ಕೃತ ಮನುಷ್ಯನಂತೆಯೇ ನಡೆದ ಅವನ ನಡಾವಳಿಯಿಂದಾಗಿ ಅವನ ಮುಖ ಬಾಲಗಳನ್ನು ಕಂಡ ಹೊರತು ಅವನನ್ನು ಮಾನವನಂತೆಯೇ ಚಿತ್ರಿಸಲಾಗಿದೆ ಅವನಿಗುಂಟು ಪರಿಪೂರ್ಣ ಬೆಳೆದ ಮಾನವಚಿತ್ತ ಎಂತಲೇ ಅವನು ಸರ್ವರಿಗೂ ಪ್ರಿಯನಾದ

ಅಂತಹ ಹಿರಿಯನ ಹಾದಿಯಲ್ಲಿ ನಡೆಯುವುದು ನಂತರ ಬಂದಿರುವ ನಮ್ಮ ಕರ್ತವ್ಯವಾಗಿ ಪೂರ್ಣ ನಡೆಯಾಗದಿದ್ದರೂ ಹೆಜ್ಜೆಯಿಡುವ ಪ್ರಯತ್ನವಾದರೂ ಇದ್ದರೆ ಇಂದಿನ ಸಮಸ್ಯೆಗಳಲ್ಲಿ ಬಹುಮಟ್ಟಿನವು ಪರಿಹಾರವಾಗಬಲ್ಲವು ಎಂಬುದು ಸರ್ವಸ್ಪಷ್ಟ ಸತ್ಯವಾಗಿದೆ

ಓಂ ಶಾಂತಿಃ ಶಾಂತಿಃ ಶಾಂತಿಃ

# ಬಾಲಾಜಿ

ವಿದ್ವಾನ್ ಭೀಮಾಚಾರ್ಯಗುಡಿ

ಅಂದು ಶುಕ್ರವಾರ' ಶ್ರೀ ಬಾಲಾಜಿಯ ವಾರ

'ಪುರಿಕಡಲೆ ಬೇಕೆ? ಪುರಿ ಕಡಲೆ! ಮಸಾಲೆದಾರ ಕಡಲೆ" ಎಂದು ಕೂಗುತ್ತ ಸಂಚಾರೀ ಮಾರಾಟಗಾರನೊಬ್ಬ ಹೆಗಲಮೇಲೆ ಚೀಲಹೊತ್ತು ಬೀದಿಯಲ್ಲಿ ಸಾಗಿದ್ದನು ಗಲ್ಲಿಯಮಕ್ಕಳು ಅವನನ್ನು ಹಿಂಬಾಲಿಸಿದ್ದರು ನಾನು ಕೂಡ ತಾಯಿಯ ಹತ್ತಿರ ಕಾಡಿಬೇಡಿ 50 ನಯೆಪೈಸೆ ನಾಣ್ಯಪಡೆದೆ ಅವನಿಗೆ ಹಣಕೊಟ್ಟು ಕಡಲೆ ಪೊಟ್ಟಣ ತೆಗೆದುಕೊಂಡೆ ರುಚಿಕರವಾದ ಆ ಕಡಲೆ ಕಾಳುಗಳನ್ನು ತಾಯಿಯು ಬೆಳ್ಳಿಯಬಟ್ಟಲಲ್ಲಿ ಹಾಕಿ, ಬಾಲಾಜಿ ಭಾವ ಚಿತ್ರದ ಎದುರು ಇಟ್ಟಳು ಅದನ್ನು ನಿವೇದಿಸಿ ನಮಗೆಲ್ಲರಿಗೂ ಪ್ರಸಾದ ಹಂಚಿದಳು ಇದು ಬಾಲಾಜಿಯ ಪ್ರಸಾದ ಎಂದು ಹೇಳಿದಳು ಆಗ ನಾವು 'ಬಾಲಾಜಿ ಯಾರು?' ಎಂದು ಒಕ್ಕೊರಲಿನಿಂತ ಕೇಳಿದೆವು ನಮಗೆ ಪುರಿಗಡಲೆಯ ಸವಿಗಿಂತಲೂ ಬಾಲಾಜಿ ಕಥೆಯ ಸ್ವಾರಸ್ಯವನ್ನು ಸವಿದುಬೇಕೆಂಬ ಕುತೂಹಲ ಹೆಚ್ಚಾಯಿತು ತಾಯಿಯು ಈ ಕಥೆಯ ಸ್ವಾರಸ್ಯವನ್ನು ಹೀಗೆ ನಿರೂಪಿಸಿದಳು

ಬಾಲಾಜಿಯೆಂದರೆ ಚಿಕ್ಕ ಬಾಲಕನು ಶ್ರೀ ವಿಷ್ಣುವು ತಿರುಪತಿಯಲ್ಲಿ ಅವತರಿಸಿದಾಗ ಬಾಲರೂಪದಲ್ಲಿದ್ದನು, ವೆಂಕಟೇಶನಾಗಿ ಬಾಲರೂಪದಲ್ಲಿ ಪ್ರಕಟನಾದದ್ದರಿಂದ ಅವನಿಗೆ ಬಾಲಾಜಿ ಎಂದು ಕರೆದರು ಈ ಬಾಲಾಜಿಯು ಅವರೋಹಿಸಿದ ಪರ್ವತವೇ ಬಾಲಾಜಿಬೆಟ್ಟವೆಂದು ಪ್ರಸಿದ್ಧವಾಯಿತು ತಿರು ಅಂದರೆ ಶ್ರೀ, ತಿರುಪತಿ ಎಂದರೆ ಅವಳಪತಿ, ಶ್ರೀಪತಿ ಇವನಿಗೆ ಶ್ರೀನಿವಾಸ, ವೆಂಕೋಬಾ, ವೆಂಕಟರಮಣ, ವೆಂಕಟಾದ್ರಿರಿಯೆಂತಲೂ ವರ್ಣಿಸುವರು, ವೇಂ ಅಂದರೆ ಪಾಪಗಳು, ಇವುಗಳನ್ನು ಕಟ (ನಾಶ) ಮಾಡುವುದರಿಂದ ವೆಂಕಟಪತಿಯೆಂತಲೂ ಹೇಳುವರು ವೆಂಕಟಗಿರಿಗೆ ಅನೇಕ ಹೆಸರುಗಳು ಪುರಾಣದಲ್ಲಿ ಪ್ರಸಿದ್ಧವಾಗಿವೆ ಈ ಪರ್ವತವು ಆದಿಶೇಷನಂತಿರುವುದರಿಂದ ಶೇಷಾಚಲವೆಂತಲೂ ಅದರ ಏಳು ಹೆಡೆಗಳು ಶಿಖರಗಳಂತೆ ಶೋಭಿಸುವುದರಿಂದ 'ಸಪ್ತಗಿರಿ' ಎಂದೂ ಕೀರ್ತಿ ಪಡೆದಿದೆ ಇಲ್ಲಿರುವ ತಿರುಪತಿ ತಿಮ್ಮಪ್ಪನೇ ಬಾಲಾಜಿ

ಆದರೆ ಶ್ರೀವಿಷ್ಣುವು ತಿರುಪತಿ ಪರ್ವತದ ಮೇಲೆಯೇ ಅವತರಿಸಲು ಕಾರಣವೇನು? ರಾಮಾಯಣಕಾಲದ ರಾವಣನು ಮಹಾಶಿವಭಕ್ತನಾಗಿದ್ದನು ಆತನು ಘನಘೋರ ತಪಸ್ಸು ಮಾಡಿ ಮಹಾದೇವನನ್ನು ಪ್ರಸನ್ನೀಕರಿಸಿಕೊಂಡಿದ್ದನು "ಮೂರುಲೋಕಗಳಲ್ಲಿ ನನ್ನನ್ನು ಯಾರೂ ಕೊಲ್ಲಲಾರರು, ನಾನು ಅಜೇಯನು, ಅಮರನು" ಎಂದು ಮದೋನ್ಮತ್ತನಾಗಿದ್ದನು ಎಲ್ಲ ದೇವತೆಗಳ ಮೇಲೆ ತನ್ನ ಅಧಿಕಾರ ನಡೆಸಿದನು ಶ್ರೀ ವಿಷ್ಣುವಿನ ಪ್ರಭಾವದ ಮುಂದೆ ಆತನ ಆಟ ನಾಗದಂತಾಯಿತು ದೇವದೇವತೆಗಳು, ಋಷಿಮುನಿಗಳು ಆತನ ಉಪದ್ರವಕ್ಕೆ ಭಯಭೀತರಾಗಿ, ತಮ್ಮ ರಕ್ಷಣೆಗಾಗಿ ಕೈಲಾಸನಾಥನ ಕಡೆಗೆ ಸಾಗಿದರು ಶಿವಶಂಕರನು ನಿರುಪಾಯನಾಗಿ ಎಲ್ಲರನ್ನು ಬ್ರಹ್ಮದೇವರ ಹತ್ತಿರ ಕಳುಹಿಸಿದನು ಬ್ರಹ್ಮದೇವನಿಂದಲೂ ದೇವತೆಗಳನ್ನು ದುಃಖದಿಂದ ಪಾರು ಮಾಡುವುದಾಗಲಿಲ್ಲ ದೇವತೆಗಳು ಹತಬಲರಾದಾಗ "ನಾರಾಯಣ, ನಾರಾಯಣ' ಎಂಬ ಶಬ್ದದೊಡನೆ ದೇವರ್ಷಿ ನಾರದರ ವೀಣಾವಾದನ ಕೇಳಿಸಿತು ದೇವತೆಗಳು ನಾರದರನ್ನು ಬರಮಾಡಿಕೊಂಡು ತಮ್ಮ ಸಂಕಟವನ್ನು ನಿವೇದಿಸಿದರು

ದೇವರ್ಷಿ ನಾರದರು ಕ್ಷೀರಸಾಗರದ ಕಡೆಗೆ ಬೆರಳು ನಿರ್ದೇಶನಮಾಡಿ, "ಭಗವಾನ್ ವಿಷ್ಣುವಿಗೆ ಶರಣು ಹೋಗಿರಿ" ಎಂದರು ದೇವತೆಗಳು, ಮುನೀಶ್ವರರು ತತ್ಕಾಲಕ್ಕೆ ಹೊರಡಲು ಸಿದ್ಧರಾದಾಗ 'ಈಗ ಶ್ರೀ ವಿಷ್ಣುವು ಕ್ಷೀರಸಾಗರದಲ್ಲಿ ವಾಸವಾಗಿಲ್ಲ" ನಿಮಗೆ ಆತನ ದರ್ಶನವು ಆರ್ಯಾವರ್ತದ 'ವೆಂಕಟಗಿರಿಯಲ್ಲಿ ಆಗುವುದು,



ಅಲ್ಲಿಯೇ ಹೋಗಿರಿ' ಎಂದು ಆಕಾಶವಾಣಿಯಾಯಿತು ತ್ಯಕ್ತ್ವಾ ವೈಕುಂಠಮುತ್ತಮಂ, ಸ್ವಾಮಿ ಪುಷ್ಕರಿಣೀ ತೀರೇ ರಮಯಾ ಸಹ ಮೋದತೆ -ಎಂಬ ಆಕಾಶವಾಣಿಯನ್ನು ಕೇಳಿ ಎಲ್ಲದೇವತೆಗಳು ಶೇಷಾಚಲಕ್ಕೆ ಬಂದರು, ಬೇಗನೆ ಪ್ರಭುದರ್ಶನವಾಗಬೇಕೆಂದು ತಪಶ್ಚರ್ಯ ಪ್ರಾರಂಭಿಸಿದರು ನಾರಾಯಣ, ನಾರಾಯಣ, ಜಯನಾರಾಯಣ ಎಂಬ ಧ್ವನಿಯು ಎಲ್ಲ ಕಡೆಗೂ ಶ್ರೀಪರ್ವತದಲ್ಲಿ ಕೇಳಹತ್ತಿತು

ಈ ಪ್ರಸಂಗದಲ್ಲಿಯೇ ಅಯೋಧ್ಯೆ ರಾಜ ದಶರಥನ ಮನೋಕಾಮನೆಯು ಸಿದ್ಧಿಸಿತು ಹೇಗೆಂದರೆ ತನಗೆ ಪುತ್ರಪ್ರಾಪ್ತಿಯಾಗಬೇಕೆಂಬ ಇಚ್ಛೆ ದಶರಥನದಾಗಿತ್ತು ಗುರುವಸಿಷ್ಠರ ಹೇಳಿಕೆಯಂತೆ ಆತನು ಅಲ್ಲಿಗೆ ಒಂದು ಎಲ್ಲರೊಡನೆ ವೆಂಕಟಗಿರಿಯಲ್ಲಿ ತಪಸ್ಸು ಮಾಡಹತ್ತಿದನು ದೇವ, ಯಕ್ಷ, ಗಂಧರ್ವ, ಕಿನ್ನರರು, ಋಷಿಮುನಿಗಳೆಲ್ಲರ ತಪಸ್ಸಿಗೆ ಫಲದೊರೆಯಿತು ಆಕಾಶದಲ್ಲಿ ವಿಶಿಷ್ಟವಾದ ತೇಜಸ್ಸು ಬೆಳಗಹತ್ತಿತು ಪಕ್ಷಿಗಳು ಸುಸ್ವರಸ್ವರದಿಂದ ಗಾಯನ ಮಾಡಹದವು ವೃದ್ಧಿಯಲ್ಲಿ ಆಕಳುಗಳ ಕೆಚ್ಚಲುಗಳು ಸಮೃದ್ಧಿಯಿಂದ ತುಂಬಿಕೊಂಡವು ಪದ್ಮ ಏಕಾದಶಿಯ ಎರಡನೆಯ ಪ್ರಹರದಲ್ಲಿ ಶಂಖ ಚಕ್ರಗದಾ ಪದ್ಮಧಾರಿಯಾದ ಶ್ರೀ ವಿಷ್ಣುವು ವೆಂಕಟಗಿರಿಯಲ್ಲಿ ಅವತೀರ್ಣನಾದನು ಎಲ್ಲ ದೇವದೇವತೆಗಳು ಪುಷ್ಪವೃಷ್ಟಿ ಮಾಡಿದರು ಗಂಧರ್ವರು ಗಾಯನಮಾಡಿದರು ದೇವರ್ಷಿ ನಾರದರ ವೀಣಾವಾದನ ಕೇಳಹತ್ತಿತು ಮಂಗಲವಾದ್ಯ, ನಗಾರಿ ಸೌಬತ್ತುಗಳ ಮೊಳಗುವಿಕೆಯಿಂದ ಎಲ್ಲ ಕಡೆಗೂ ಮಂಗಲ ಮಯ ವಾತಾವರಣ ಹಬ್ಬಿತು ಪುತ್ರಕಾಮೇಷ್ಟಿಯಜ್ಞ ಮಾಡಿದ ದಶರಥನಾಜನಿಗೆ 'ರಾಮಾವತಾರ'ದಲ್ಲಿ ತಾನೇ ಮಗನಾಗಿ ಹುಟ್ಟುವೆನೆಂದೂ ರಾವಣವಧೆ ಮಾಡುವೆನೆಂದೂ ಆಶ್ವಾಸನವನ್ನಿತ್ತನು

ರೇಶಿಮೆ ವಸ್ತ್ರ, ಸುವರ್ಣ ಸ್ತಂಭಗಳಿಂದ ಭವ್ಯ ಮಂಟಪವನ್ನು ಆತನಿಗಾಗಿ ತಯಾರಿಸಿದರು ವೆಂಕಟೇಶನ ಉತ್ಸವದಲ್ಲಿ ಋಷಿಮುನಿಗಳು, ದೇವದೇವತೆಗಳು ಕೂಡಿ ಬ್ರಹ್ಮದೇವನ ಹಿರಿತನದಲ್ಲಿ ಬ್ರಹ್ಮೋತ್ಸವವನ್ನು ನೆರವೇರಿಸಿದರು ಆಶ್ವೀಜ ಶುದ್ಧ ಪ್ರತಿಪದೆಯಿಂದ ಪ್ರಾರಂಭಿಸಿದರು ಬ್ರಹ್ಮದೇವರೇ ಪುಣ್ಯಾಹವಾಚನಕ್ಕೆ ಕುಳಿತು ಉತ್ಸವ ಕಂಕಣವನ್ನು ಕಟ್ಟಿದರು ಮುಂದೆ ಪ್ರತಿದಿವಸದಲ್ಲಿ ಸೂರ್ಯ, ಚಂದ್ರ, ಕುದುರೆ, ಆನೆ, ಶೇಷ, ಮಾರುತಿ, ಮಯೂರ, ಗರುಡ ಮೊದಲಾದ ವಾಹನಗಳ ಮೇಲೆ ಶ್ರೀ ಸ್ಥಾಪನೆ ಮಾಡಹತ್ತಿದರು ಬ್ರಹ್ಮದೇವನು ಚಿತ್ರಾನಕ್ಷತ್ರದಲ್ಲಿ ಗರುಡಸ್ತಂಭದ ಸ್ಥಾಪನೆಮಾಡಿದನು ಮತ್ತು ಪ್ರಭುವು ಮೂಲಾನಕ್ಷತ್ರದಲ್ಲಿ ಗರುಡವಾಹನನಾಗಿರುವಾಗ ಶ್ರೀ ವೆಂಕಟೇಶದೇವರ ವಿವಾಹವನ್ನು ನಿಶ್ಚಯಿಸಿದರು (ಬ್ರಹ್ಮೋತ್ಸವವೆಂದು ತಿರುಪತಿಯಲ್ಲಿ ಈಗಲೂ ಈ ಉತ್ಸವವನ್ನು ಆಚರಿಸುವರು) ಶ್ರೀ ವೆಂಕಟೇಶದೇವರ ವಿವಾಹಮಹೋತ್ಸವವು ತಿರುಪತಿಯಲ್ಲಿ ಪದ್ಮಾವತಿಯೊಡನೆ ಆದ ಕಥೆಯನ್ನು ವಿವರಿಸುತ್ತೇನೆ

'ಕಾಳಹಸ್ತಿ' ಎಂಬ ಗ್ರಾಮದಲ್ಲಿ 'ಮಾಧವ' ನೆಂಬ ಒಬ್ಬ ಬ್ರಾಹ್ಮಣನಿದ್ದನು ಆತನು ಒಬ್ಬ ವಾರಾಂಗನೆಯ ಮೋಹಜಾಲದಲ್ಲಿ ಇದ್ದನು ಅವಳ ಜೊತೆಗೆ ಮದ್ಯಮಾಂಸಗಳನ್ನು ಸೇವಿಸುತ್ತ ಕಾಮಾಸಕ್ತನಾಗಿ ಕಾಲಕಳೆಯುತ್ತಿದ್ದನು ಕೆಲವು ವರ್ಷಗಳಲ್ಲಿ ವಾರಾಂಗನೆ ತೀರಿಕೊಂಡಳು ವ್ಯಸನಾಧೀನನಾದ ಮಾಧವನನ್ನು ಸಮಾಜವು ದೂರ ಮಾಡಿತು ಕೆಳಮಟ್ಟಕ್ಕೆ ಇಳಿದ ಅವನಿಗೆ ಒಮ್ಮೆಲೆ ಪಶ್ಚಾತ್ತಾಪವಾಯಿತು ತಾನು ಮಾಡಿದ ಪಾಪ ಕರ್ಮಗಳ ಪಾಲನೆಗಾಗಿ ತಪಸ್ಸನ್ನಾಚರಿಸಲು ನಿಶ್ಚಯಿಸಿದನು ಅದಕ್ಕಾಗಿ 'ಶೇಷಾಚಲ'ದಮೇಲೆ

ಬಂದನು, ಬ್ರಹ್ಮದೇವರನ್ನು ಕುರಿತು ಘನಘೋರ ತಪಸ್ಸು ಮಾಡಿದನು ಬ್ರಹ್ಮದೇವನು ಪ್ರಸನ್ನನಾದನು ಮಾಧವನ ಸರ್ವಪಾಪಗಳು ಸುಟ್ಟುಹೋದವು "ನೀನು ಮುಂದಿನ ಜನ್ಮದಲ್ಲಿ ಆಕಾಶ ರಾಜನಾಗುವಿ, ನಿನಗೆ ಹೊಟ್ಟೆಯಿಂದ ಸಾಕ್ಷಾತ್ ಜಗಜ್ಜನನಿಯು ಪದ್ಮಾವತಿಯಾಗಿ ಹುಟ್ಟುವಳು ಭಗವಾನ್ ವಿಷ್ಣುವು ಶೇಷಾಚಲದಲ್ಲಿ ಅವಳೊಡನೆ 'ಪಾಣಿಗ್ರಹಣ' ಮಾಡುವನು" ಎಂದು ಹೇಳಿದನು

ಅದರಂತೆ ಮಾಧವ ಬ್ರಾಹ್ಮಣನು ಜನ್ಮಾಂತರದಲ್ಲಿ ಆಕಾಶರಾಜನಾಗಿ ಜನ್ಮತಾಳಿದನು ಧರಣೀದೇವಿಯು ಆತನ ಹೆಂಡತಿ, ತೊಂಡಮಂಡಲ ರಾಜ್ಯಕ್ಕೆ ಒಡೆಯನಾದನು ಇವನ ರಾಜ್ಯದಲ್ಲಿ ಪ್ರಜೆಗಳೆಲ್ಲರೂ ಭಗವದ್ಭಕ್ತರಾಗಿ ಸುಖದಿಂದ ಇದ್ದರು ಬಹಳ ದಿನ ಮಕ್ಕಳಾಗದಿರಲು ರಾಜದಂಪತಿಗಳು ಪುತ್ರಪ್ರಾಪ್ತಿಗಾಗಿ ಯಜ್ಞ ಮಾಡಲು ನಿಶ್ಚಯಿಸಿದರು ಯಜ್ಞಕ್ಕಾಗಿ ಸಿದ್ಧವಾದ ಭೂಗರ್ಭ ಜಲಾಶಯದ ಕಮಲಪುಷ್ಪದಲ್ಲಿ ಒಂದು ಸುಂದರ ಕನ್ಯೆಯು ಕಂಗೊಳಿಸಿತು ಅದು ಮೊದಲು ಪದ್ಮದಂತೆ ಕಂಡಿದ್ದರಿಂದ ಅವಳ ಹೆಸರು 'ಪದ್ಮಾವತಿ' ಎಂದು ಪ್ರಸಿದ್ಧವಾಯಿತು ಷೋಡಶಿಯಾದಾಗ ಅವಳ ಸೌಂದರ್ಯಕ್ಕೆ ಮನಸೋತು ವೆಂಕಟೇಶನು ಈ ಪದ್ಮಾವತಿಯೊಡನೆ ಮದುವೆಯಾಗಲು ನಿಶ್ಚಯಿಸಿದನು ಈ ವಿವಾಹ ಸಂದರ್ಭದ ಕಥೆಯನ್ನು ಇನ್ನೊಂದು ರೀತಿಯಿಂದ ಹೇಳಿತ್ತಾರೆ

ದ್ವಾಪರಯುಗದಲ್ಲಿ ಚೋಳರಾಜನು ಇಲ್ಲಿ ರಾಜ್ಯವಾಳುತ್ತಿದ್ದನು ಆ ವೇಳೆಯಲ್ಲಿ ಬ್ರಹ್ಮದೇವನು ಕಾಮಧೇನುವಿನ, ರುದ್ರದೇವರು ಕರುವಿನ ಮತ್ತು ಮಹಾಲಕ್ಷ್ಮಿಯು ಗೌಳಿತಿಯ ರೂಪದಲ್ಲಿದ್ದರು ಆ ಗೌಳಿತಿಯು ಕಾಮಧೇನುವನ್ನು ಚೋಳ ರಾಜನಿಗೆ ಮಾರಿದಳು ರಾಜನು ಆತಳ ಕಾವಲಿಗಾಗಿ ಒಬ್ಬ ದನಗಾಹಿಯನ್ನು ನಿಯಮಿಸಿದನು ಸಮೀಪದ ಗವಿಯಲ್ಲಿಯೇ ಶ್ರೀನಿವಾಸನು ವಾಸವಾಗಿದ್ದನು ಕಾಮಧೇನುವು ಅಲ್ಲಿಗೆ ಬಂದು ತನ್ನ ಕೆಚ್ಚಲಲ್ಲಿದ್ದ ಹಾಲನ್ನೆಲ್ಲ ಕರೆಯುತ್ತಿತ್ತು ಮನೆಗೆ ಹಾಲು ದೊರೆಯದಂತಾಗಲು, ದನಗಾಹಿಯು ಒಂದು ದಿನ ಅದನ್ನು ಹಿಂಬಾಲಿಸಿದನು ಆಗ ಕಾಮಧೇನುವು ದೂರ ದಿನ್ನೆಯ ಮೇಲೆ ನಿಂತುಕೊಂಡು ಗವಿಯಲ್ಲಿ ಹಾಲುಸುರಿಸುತ್ತಿರುವುದನ್ನು ಕಂಡನು ಆತನು ಸಿಟ್ಟಿಗೆದ್ದು ಬಡಿಗೆಯಿಂದ ಹೊಡೆದನು ಆ ಬಡಿ ಗೆಯ ಗುರಿತಪ್ಪಿ ಶ್ರೀನಿವಾಸನ ತಲೆಯ ಮೇಲೆ ಏಟುಬಿದ್ದಿತು ತನ್ನ ಗುಹೆ (ಹುತ್ತ)ಯನ್ನು ಕೀಳಿಸಲು ಬಂದ ಚೋಳ ರಾಜನನ್ನು ಶ್ರೀನಿವಾಸನು ಸಿಟ್ಟಿನಿಂದ ನೋಡಿದ ಕೂಡಲೆ ರಾಜನಿಗೆ ಪಿಶಾಚಿಜನ್ಮ ಬಂದಿತು, ತಪಃಪ್ರಭಾವದಿಂದ ಪಿಶಾಚಿ ಜನ್ಮದಿಂದ ಮುಕ್ತನಾದನು ವಿಷ್ಣುವು ಪ್ರಸನ್ನನಾಗಿ "ನೀನು ಮುಂದಿನ ಜನ್ಮದಲ್ಲಿ ಆಕಾಶರಾಜನಾಗುವಿ, ನಿನ್ನ ಹೊಟ್ಟೆಯಿಂದ ಹುಟ್ಟಿದವಳು, ಪದ್ಮಾವತಿಯನ್ನು ಶ್ರೀನಿವಾಸನು ತಿರುಪತಿಯ ಬೆಟ್ಟದಲ್ಲಿ ವಿವಾಹವಾಗುವನು" ಎಂದು ಹೇಳಿದನು

ಶ್ರೀನಿವಾಸ, ಪದ್ಮಾವತಿಯರ ಮಂಗಳ ವಿವಾಹವು ನಿಶ್ಚಿತವಾಯಿತು ಆ ಮಂತ್ರಣದಂತೆ ಮೂರುಲೋಕಗಳ, ಸ್ವರ್ಗ, ಪೃಥ್ವಿ, ಪಾತಾಳ ಲೋಕಗಳಲ್ಲಿಯವರು ಈ ಉತ್ಸವದಲ್ಲಿದ್ದರು ದೇವದೇವತೆಗಳು, ಋಷಿಮುನಿಗಳು ಹಾಗೂ ಅನೇಕ ಭಕ್ತರು ವಿವಾಹಮಹೋತ್ಸವಕ್ಕಾಗಿ ತಿರುಪತಿಗೆ ಬಂದಿದ್ದರು ಬಾಸಂದಿ, ಜಿಲೇಬಿ, ನಾಚಿರಭಾತ ಈ ರೀತಿಯಾಗಿ ಬೇರೆಬೇರೆ ಪಕ್ವಾನ್ನಗಳ ಭೋಜನೆಯಾಯಿತು ಬೆಲೆಯುಳ್ಳ ವಸ್ತ್ರಗಳನ್ನು ಅಲಂಕಾರಗಳನ್ನು ಧರಿಸಿದ ಸ್ತ್ರೀಪುರುಷರಿಂದ ಶೇಷಾಚಲವು ಶೋಭಿಸುತ್ತಿತ್ತು ಮಂಗಲವಾದ್ಯಗಳ ನಿನಾದವು ಎಲ್ಲೆಡೆಯಲ್ಲಿಯೂ ತುಂಬಿತ್ತು ಇಷ್ಟೆಲ್ಲ ಇದ್ದರೂ ಶ್ರೀನಿವಾಸನ ಮನಸ್ಸು ಅಸ್ವಸ್ಥವಾಗಿದ್ದಿತು ಅವನ ಪ್ರಿಯ ಪತ್ನಿ ಲಕ್ಷ್ಮೀದೇವಿಯು ಮಾತ್ರ ಈ ವಿವಾಹ ಸಮಾರಂಭಕ್ಕೆ ಬಂದಿರಲಿಲ್ಲ ಅವಳನ್ನು ಸೂರ್ಯನಾರಾಯಣನ ಜೊತೆಗೆ ಕರವೀರಕ್ಷೇತ್ರಕ್ಕೆ ಕಳಿಸಿದ್ದನು ಅದೇ ಸೂರ್ಯನು ಈಗ ತನ್ನ ಸಪ್ತ ಅಶ್ವರಥದಲ್ಲಿ ಲಕ್ಷ್ಮೀದೇವಿಯನ್ನು ಶೇಷಾಚಲಕ್ಕೆ ಕರೆತಂದನು ಮಹಾಲಕ್ಷ್ಮಿಯು ವಿವಾಹಮಹೋತ್ಸವದಲ್ಲಿ ಭಾಗವಹಿಸಿದಳು ವಿವಾಹನಂತರ ಅಲ್ಲಿಯೇ ಉಳಿದಳು ಈಗಲೂ ಶೇಷಾಚಲದಲ್ಲಿ ಅವಳ ಮಂದಿರವಿದೆ

ಪದ್ಮಾವತಿ ವೆಂಕಟೇಶರ ವಿವಾಹವು ಅತಿವೈಭವದಿಂದ ಜರುಗಿತಷ್ಟೇ! ಶ್ರೀನಿವಾಸನು ಅತಿ ಸ್ನೇಹದಿಂದ ಅವಳನ್ನು ಕಂಠಮಣಿಯಾಗಿ ಸ್ವೀಕರಿಸಿದನು ತಿರುಪತಿಯ ವೆಂಕಟೇಶ ಮಂದಿರದಲ್ಲಿ ವೆಂಕಟೇಶನ ಮೂರ್ತಿಯೊಂದೇ ಇದೆ ಅವನ ಬದಿಯಲ್ಲಿ ಲಕ್ಷ್ಮೀ, ಇಲ್ಲವೆ ಪದ್ಮಾವತಿಯರ ಮೂರ್ತಿಗಳಿಲ್ಲ ಪದ್ಮಾವತಿಯ ಸುವರ್ಣ ಪ್ರತಿಮೆಯು ಮಾತ್ರ ವೆಂಕಟೇಶನ ಕೊರಳಿನಲ್ಲಿದೆ ಈ ಪದ್ಮಾವತಿಯೇ ಭೂಮಿಕನ್ಯಾ, ಶ್ರೀರಾಮಪತ್ನಿ ಸಾಧ್ವೀಸತಿ ಸೀತಾದೇವಿ ಹೀಗಿದೆ ಶ್ರೀವೆಂಕಟೇಶ ದೇವರ ಕಥೆ

ತಿರುಪತಿ ದೇವಸ್ಥಾನವು ಹಿಂದೂ ಜನರ ಆರಾಧ್ಯದೈವತವಾಗಿದೆ ಹಿಂದುಸ್ತಾನದ ಎಲ್ಲ ಪ್ರಾಂತಗಳಲ್ಲಿಯ ಭಕ್ತರು ಸಾವಿರಾರು ಸಂಖ್ಯೆಯಲ್ಲಿ ಬರುವರು ನವರಾತ್ರಿ ಮೊದಲಾದ ವಿಶಿಷ್ಟ ಪ್ರಸಂಗಗಳಲ್ಲಿ ಲಕ್ಷಗಟ್ಟಲೆ ಭಾವಿಕರು ಆಗಮಿಸಿ ಉತ್ಸವದಲ್ಲಿ ಭಾಗವಹಿಸುವರು ಇಲ್ಲಿ ಅನೇಕ ವಿದ್ಯಾಲಯಗಳು, ರುಗ್ಣಾಲಯಗಳು ಇವೆ ಯಾತ್ರಿಕರಿಗೆ ಉಳಿದುಕೊಳ್ಳುವ ಹಾಗೂ ಬಸ್ಸಿನ ವ್ಯವಸ್ಥೆ ಅಚ್ಚುಕಟ್ಟಾಗಿದೆ ವೆಂಕಟೇಶ ಮಂದಿರವು ದ್ರಾವಿಡ ಶಿಲ್ಪದ ಉತ್ತಮ ನಮೂನೆ ಇದೆ ಮಂದಿರದಲ್ಲಿ ಮೂರು ಪ್ರಾಕಾರಗಳಿವೆ ಗೋಪುರವು ದಕ್ಷಿಣಕಡೆಯ ಮಂದಿರದ ವೈಶಿಷ್ಟ್ಯವಾಗಿದೆ ತಿರುಪತಿಯ ಗೋಪುರವು ಪ್ರೇಕ್ಷಣೀಯವಾಗಿದೆ ಬಂಗಾರದ ತಗಡಿನಿಂದ ಹೊದಿಸಿದ ಧ್ವಜಸ್ತಂಭವಿದೆ ಇದಲ್ಲದೆ ಬೆಟ್ಟದ ಮೇಲೆ ವರಾಹಸ್ವಾಮಿ, ಶ್ರೀರಾಮಲಕ್ಷ್ಮಣ, ಸೀತಾ, ಹನುಮಾನ ಮೊದಲಾದ ಅನೇಕ ದೇವಾಲಯಗಳಿವೆ ಪಾಂಡವ, ಜಾಬಾಲಿ, ಗೋಗರ್ಭ ಅಶೀತೀರ್ಥ ಇತ್ಯಾದಿ ತೀರ್ಥಸರೋವರಗಳಿವೆ ಮಾನವರ ಉದ್ಧಾರಕ್ಕೆ ತೀರ್ಥಕ್ಷೇತ್ರಗಳು, ಮತ್ತು ಭಗವಂತನ ಸಾನ್ನಿಧ್ಯವಿರುವದರಿಂದ ತಿರುಪತಿಯು ಮಹಾಕ್ಷೇತ್ರವಾಗಿದೆ ಈ ತಿರುಪತಿ ತಿಮ್ಮಪ್ಪನೇ ಪುರಿಗಡಲೆ ಪ್ರಿಯನು ಅಂತೆಯೇ ಈಗಲೂ ಶುಕ್ರವಾರದಂದು ಸಕ್ಕರೆ ಪುರಾಣಿಯನ್ನು ಹಂಚುವರು

ಅದರಂತೆ ನೆಲಗಡಲೆ ಕೂಡ ಮಹಾಲಕ್ಷ್ಮಿಗೆ ಪ್ರಿಯವಾದುದು ಹೇಗೆ? ಕಡಲೆಯೆಂದರೆ ದ್ವಿದಳ ಧಾನ್ಯ ಕಡಲೆಯ ಕಾಳಿನಲ್ಲಿ ಎರಡು ದಳಗಳಿರುವವು ಇವು ಸತಿಪತಿಯರಂತೆ ಇದ್ದು ಒಂದನ್ನೊಂದು ಹೊಂದಿಕೊಂಡಿರುವವು ನೆಲಗಡಲೆ ಎಂದರೆ ನೆನೆದ ಅಥವಾ ತುಂಬಿದ ಕಡಲೆ, ಇದು ಅಭಿವೃದ್ಧಿಯ ಹಾಗೂ ಮಾಂಗಲ್ಯದ ಸಂಕೇತ ಅಂತೆಯೇ ಸುವಾಸಿನಿಯರು ಗೌರೀವ್ರತ, ಹಬ್ಬ ಉತ್ಸವಗಳಲ್ಲಿ ನೆನೆಗಡಲೆಯ ಉಡಿ ತುಂಬುವರು ಶ್ರೀನಿವಾಸನು ಪುರಿಗಡಲೆ ಪ್ರಿಯನಾದರೆ ಮಹಾಲಕ್ಷ್ಮಿಯು ನೆಲಗಡಲೆ ಪ್ರಿಯಳು ಪತಿಗೆ ಮೆಚ್ಚುಕೆಯಾದ ವಸ್ತುವು ಸತಿಗೂ ಮೆಚ್ಚುಗೆಯಾಗಬೇಕಾದುದು ಸಹಜ ನೆಲಗಡಲಿಗೆ 'ಹರಿಭರೆ' ಯೆಂತಲೂ ಹೇಳುತ್ತಾರೆ ಹೊಸವರ್ಷದ ಹರಿಕಾರನಂತಿರುವ ವಸಂತಋತುವಿನ ಆಗಮನವಾಗಿದೆ ಪ್ರಕೃತಿಯೆಲ್ಲವೂ ಹೊಸ ಚೈತನ್ಯದಿಂದ ತುಂಬಿತು ಉಕ್ಕತ್ತಲಿದೆ ಸ್ತ್ರೀ ಪುರುಷರೆಲ್ಲರೂ ತಮ್ಮತಮ್ಮ ಮನೆ ಮಂದಿರಗಳನ್ನು ಅಲಂಕರಿಸಿ ಸಂಭ್ರಮದಿಂದ ಹಬ್ಬ ಹುಣ್ಣಿಮೆಗಳನ್ನು ಆಚರಿಸುತ್ತಿದ್ದಾರೆ ವೈಭವ ಪ್ರದವಾದ ಹಬ್ಬಗಳಲ್ಲಿ ಚೈತ್ರಗೌರಿ ಹಬ್ಬವೊಂದು ಇದು ಚೈತ್ರಶುದ್ಧತೃತಿಯಾ (ಗೌರೀತದಿಗೆ) ಯಿಂದ ವೈಶಾಖ ಶುದ್ಧ ತೃತಿಯಾ (ಅಕ್ಷಯ




# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5-00 ಪ್ರಾ 5-30 | ಪ್ರಾ ೫-೦೦ ಪ್ರಾ 5-30 |
| ವಿಶ್ವರೂಪ ಸರ್ವದರ್ಶನ | ಪ್ರಾ 5-30 ಪ್ರಾ 6-00 | ಪ್ರಾ ೫-೩೦ ಪ್ರಾ 6-00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6-00 ಪ್ರಾ 6-30 | ಪ್ರಾ 6-00 ಪ್ರಾ 6-30 |
| ಸಹಸ್ರನಾಮಾರ್ಚನೆ | ಪ್ರಾ 6-30 ಪ್ರಾ 7-00 | ಪ್ರಾ 6-30 ಪ್ರಾ 7-00 |
| ಮೊದಲನೇ ಗಂಟೆ | ಪ್ರಾ 7-00 ಪ್ರಾ 7-30 | ಪ್ರಾ 7-00 ಪ್ರಾ 7-30 |
| ಸರ್ವದರ್ಶನ | ಪ್ರಾ 7-30 ಪ್ರಾ 10 00 | *ಅಭಿಷೇಕ ಪ್ರಾ 7-30 ಪ್ರಾ 8-30 |
| | | ಸಮರ್ಪಣ ಪ್ರಾ 8-30 ಪ್ರಾ 9-30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10-00 ಪ್ರಾ 10-30 | ಪ್ರಾ 9-30 ಪ್ರಾ 10-30 |
| * ಆರ್ಜಿತ | | ಕಲ್ಯಾಣೋತ್ಸವ ಪ್ರಾ 10-30 ಮ 12-00 |
| ಸರ್ವದರ್ಶನ | ಪ್ರಾ 10-30 ಸಂ 6-30 | ಪ್ರಾ 10-30 ಸಂ 6-30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6-30 ರಾ 7-00 | ಸಂ 6-30 ರಾ 7-00 |
| ಸರ್ವದರ್ಶನ | ರಾ 7-00 ರಾ 8-45 | ರಾ 7-00 ರಾ 8-45 |
| ಏಕಾಂತ ಸೇವೆ | ರಾ 8-45 ರಾ 9-00 | ರಾ 8-45 ರಾ 9-00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ 200-00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ 100-00 |
| ಅರ್ಚನೆ (ಒಂದು ವರ್ಷಕ್ಕೆ) | ರೂ 42-00 |
| ಶಾಶ್ವತ ನಿತ್ಯಾರ್ಚನೆ | ರೂ 542-00 |

ತೃತಿಯಾ) ದವರೆಗೆ ನಡೆಯುವದು, ಈ ಹಬ್ಬದಲ್ಲಿ ಸುವಾಸಿನಿಯರು ಅರಿಷಿಣ ಕುಂಕುಮಕ್ಕಾಗಿ (ಹೂ ವೀಳ್ಯಕ್ಕಾಗಿ) ಆಮಂತ್ರಿಸುವರು ಬಂದ ಮುತ್ತೈದೆಯರಿಗೆ ಆದರದಿಂದ ಪಾದತೊಳೆಯುವರು ಅರಿಷಿಣ ಕುಂಕುಮ, ಮಾಗಲದ್ರವ್ಯಗಳನ್ನು ಹೂವೀಳ್ಯವನ್ನೂ ಕೊಟ್ಟು ಸತ್ಕರಿಸುವರು ಸಮೃದ್ಧಿ ದ್ಯೋತಕವಾದ ಸೆಲಗಡಲೆ ಉಡಿತುಂಬುವರು ಅಲ್ಪೋಪಹಾರಕ್ಕಾಗಿ ಕಡಲೆ ಉಸಲಿ, ಕೋಸಂಬರಿಗಳನ್ನೂ ಕೊಡುವರು ಮಾವಿನರಸದ ತರಿಪು ಪಾನೀಯ ನೀಡುವರು ಕೋಸಂಬರಿಯಲ್ಲಿ ಮಾವಿನ ಕಾಯಿಯ ಚೂರು, ಹಾಗೂ ಕಡಲೆ ಬೇಳೆಯನ್ನೂ ಸೇರಿಸಿ ರುಚಿಯಾಗುವಂತೆ ಮಾಡುವರು ಹರಭರೆ ಅಂದರೆ ಕಡಲೆ ಯಾವಾಗಲೂ ತುಂಬಿಕೊಂಡಿರುವುದು ಎಂದು ಅರ್ಥವಾಗುತ್ತದೆ ಧನ, ಧಾನ್ಯ, ದಾಗದಾಗೀನೆಗಳು, ಮಕ್ಕಳು ಮರಿಗಳ ಸಮೃದ್ಧಿಯೇ ತುಂಬಿದ ಮನೆ ಎನಿಸುವದು ತುಂಬಿದ ಮನೆಯಲ್ಲಿ ಲಕ್ಷ್ಮಿಯು ಸತತವಾಗಿ ವಾಸವಾಗಿರುವಳು, ಅಲ್ಲಿ ತೃಪ್ತಿ ಇರುವದು ಎಲ್ಲಿ ಸಂಪತ್ತು (ಲಕ್ಷ್ಮಿ) ಇರುವದೋ ಅಲ್ಲಿ ತೃಪ್ತಿ (ಸಂತೋಷ) ಇರುವುದು ಅಂತೆಯೇ ಹೆಣ್ಣುಮಕ್ಕಳು ಉಡಿ ತುಂಬುವಾಗ ಸಂಪತ್ ಮತ್ತು ಸಂತೋಷಕ್ಕಾಗಿ ಕಡಲೆಯನ್ನು ಉಪಯೋಗಿಸುವರು ಕಡಲೆಯನ್ನೆ ಹುರಿದು ತಯಾರಿಸಿದ ಹುರಿಗಡಲೆಯು ಶ್ರೀನಿವಾಸನಿಗೆ ಪ್ರಿಯವಾದದ್ದು ಅಂತೆಯೇ ಶುಕ್ರವಾರ ದಿನ ಪುರಾಣಿ ಸಕ್ಕರೆಯನ್ನು ನಿವೇದಿಸಿ ಎಲ್ಲರಿಗೂ ಹಂಚುವರು ಯಾವುದು ಹೆಂಡಲೆಗೆ ಅತಿ ಪ್ರಿಯುವೋ ಅದು ಗಂಡನೂರು, ಪ್ರಿಯವಾದುದು ಸಹಜ ಅಂತೆಯೆ ಸತಿಪತಿಯರಾದ ಲಕ್ಷ್ಮೀ, ಶ್ರೀನಿವಾಸರಿಗೆ ಬೇರಬೇರೆ ರೂಪದಲ್ಲಿ ಅಂದರೆ ನೆನೆಗಡಲೆಯಾಗಿ ಪುರಿಗಡಲೆಯಾಗಿ ಪ್ರಿಯವಾದುವುಗಳು ಇವುಗಳನ್ನು ಅವರಿಗೆ ಸಮರ್ಪಿಸಿ ಭಕ್ತರು ಇಷ್ಟಾರ್ಥಸಿದ್ಧಿಗಾಗಿ ಪ್ರಾರ್ಥನೆ ಮಾಡಿಕೊಳ್ಳುವರು

ಸರ್ವಮಂಗಲ ಮಾಂಗಲ್ಯೇ
ಶಿವೇ ಸರ್ವಾರ್ಥ ಸಾಧಿಕೆ
ಶರಣ್ಯೇ ತ್ರ್ಯಂಬಕೇ ಗೌರಿ
ನಾರಾಯಣಿ ನಮೋಸ್ತುತೆ

ಈ ಚೈತ್ರಗೌರಿಯ ಉತ್ಸವ ಹಾಗೂ ಹೂವೀಳ್ಯ, ಮೊದಲಾದ ಸಂಪ್ರದಾಯಗಳು ಈಗಲೂ ಬಳಕೆಯಲ್ಲಿವೆ

|| ಶ್ರೀ ಲಕ್ಷ್ಮೀವೆಂಕಟೇಶಾರ್ಪಣಮಸ್ತು ||

***

# ವನ್ದೇವಾಲ್ಮೀಕಿಕೋಕಿಲಂ

ರಾಮಭದ್ರ ದೀಕ್ಷಿತನ 'ಜಾನಕೀ ಪರಿಣಯ', ವಭೂತಿಯ 'ಉತ್ತರರಾಮ ಚರಿತ - - ಹಾವೀರ ಚರಿತ', ವ್ಯಾಸಕೃತ ಭಾಗವತಾಂತ ರ್ಗತ 'ರಾಮಾಯಣ', ತುಲಸೀದಾಸರ 'ರಾಮ ರಿತ ಮಾನಸ', ತಮಿಳಿನ 'ಕಂಬರಾಮಾಯಣ', ಂಗಾಳಿಯ 'ಕೃತ್ತಿವಾಸರಾಮಾಯಣ', ಸಂಸ್ಕೃ ದ 'ಆನಂದರಾಮಾಯಣ - ಅಧ್ಯಾತ್ಮರಾಮಾ ಯಣ' ಆಂಧ್ರಭಾಷೆಯ 'ರಂಗನಾಥ ರಾಮಾಯಣ ಭಾಸ್ಕರರಾಮಾಯಣ' ಹೀಗೆ ನೂರಾರು ರಾಮಾಯಣ ಗ್ರಂಥಗಳನ್ನು ಭಾರತೀಯ ಕವಿ ಪುಂಗವರು ರಚಿಸಿದ್ದಾರೆ ಇದಲ್ಲದೆ ಜನಪದ ಸಾಹಿತ್ಯದಲ್ಲಿ ರಾಮಾಯಣವನ್ನು ನಾನಾರೀತಿಯಲ್ಲಿ ಪ್ರಸ್ತಾಪ ಮಾಡಲಾಗಿದೆ ವಾಗ್ಗೇಯಕಾರರು ತಮ್ಮ ಅನುಪಮ ಕೃತಿಗಳಲ್ಲಿ ರಾಮಾಯಣದ ವಿವಿಧ ಸನ್ನಿವೇಶಗಳನ್ನು ಕುರಿತು ಚಿನ್ತನ ಮಾಡಿದ್ದಾರೆ ಹೀಗಾಗಿ - "ಚರಿತಂ ರಘುನಾಥಸ್ಯ ಶತಕೋಟಿ ಪ್ರವಿಸ್ತರಂ" - ಆಗಿದೆ ಜೈನ ಕವಿಗಳು ತಮ್ಮದೇ ದ ವಿಶಿಷ್ಟ ದೃಷ್ಟಿಕೋನದಿಂದ ರಾಮಾಯಣ ವನ್ನು ರಚಿಸಿದರು ಸಮಗ್ರ ಭಾರತೀಯ ಭಾಷೆ ಗಳಲ್ಲಿ ರಾಮಾಯಣ ರಚನೆಯಾಗಿದೆ ಯಾರೇ ಬರೆಯಲಿ - ರಾಮಾಯಣ ಗ್ರಂಥ ಸಕ್ಕರೆ ಅಚ್ಚು ಹೇಗೆ ತಿಂದರೂ ರುಚಿ ಮಧುರಂ ಮಧುರಂ ಅಕ್ಷರಂ - ಆಗಿರೋಣದರಿಂದಲೇ ಆ ಪೂಜ್ಯ ಗ್ರಂಥದ ಬಗ್ಗೆ - ಈ ಮಾತು ಜನ ಬಳಕೆಯ ಲ್ಲಿದೆ - ಏಕೈಕ ಮಕ್ಷರಂ ಪ್ರೋಕ್ತಂ ಮಹಾಪಾತಕ ನಾಶನಂ" ಈ ಗ್ರಂಥದ ಪಾರಾಯಣ ನಿತ್ಯಕರ್ಮ ವಾಗಿದೆ ಆನಂದದಾಯಕವಾಗಿದೆ - ಚೇತೋಹಾ ರಿಯಾಗಿದೆ - ಬಾಳಿಗೊಂದು ನಂಬಿಕೆಯಾಗಿದೆ ಭಾರತೀಯ ಸಂಸ್ಕೃತಿ ಪರಿಚಯವಾಗಿದೆ ಸನಾ ತನ ಧರ್ಮ ಸ್ವರೂಪದರ್ಶನವಾಗಿದೆ ಚಿರಸ್ಥಾಯಿ ಯಾದ ಸಂದೇಶವಾಗಿದೆ ಕರ್ತವ್ಯದ - ಧರ್ಮದ ಲೋಕಕಾರುಣ್ಯದ - ಮಹೋನ್ನತ ಆದರ್ಶ ಮೌಲ್ಯಗಳ ಅಕ್ಷಯ ನಿಧಿಯಾಗಿದೆ

ರಾಮಾಯಣ ಕೇವಲ ಕಥೆಯಲ್ಲ - ಪುರಾ ಣವಲ್ಲ - ಅದು ಧರ್ಮ - ಅದು ಸಂಸ್ಕೃತಿ ಅದು ಲಾವಣ್ಯ - ಅದು ಮಾಧುರ್ಯ - ಅದು ಸತ್ಯ - ಶಿವ - ಸುಂದರ ಗ್ರೀಕ್ ಸಂಸ್ಕೃತಿಯನ್ನರ್ಥಮಾಡಿಕೊಳ್ಳಬೇಕಾದರೆ, ಯೂಲಿಸಿಸ್ - ಅಖಿಲೀಸ್ - ಹರ್ಕ್ಯುಲಸ್, ಅಪೋಲೋ - ಹೆಕ್ಟರ್ ಮುಂತಾದವರ ಪರಿಚಯ ಅತ್ಯಗತ್ಯ ಇದೇ ರೀತಿಯಲ್ಲಿ ಭಾರತೀಯ ಸಂಸ್ಕೃತಿಯ ಪರಿ ಚಯವಾಗಬೇಕಾದರೆ - ರಾಮ - ಕೌಸಲ್ಯೆ - ವಿಶ್ವಾಮಿತ್ರ - ಜನಕ - ಭರತ - ವಿಭೀಷಣ - ಸುಗ್ರೀವ - ಮಾರುತಿ - ಸೀತಾಮಾತೆ - ಗುಹ - ಶಬರಿ - ವಸಿಷ್ಠ - ಅಹಲ್ಯೆ ಮುಂತಾದವರ ಪರಿಚಯ ಅತ್ಯಗತ್ಯ ಭಾರತೀಯ ಇತಿಹಾಸದಲ್ಲಾ ಗಲೀ, ಪುರಾಣ ಸಾಹಿತ್ಯದಲ್ಲಾಗಲೀ, ಕಾವ್ಯ ಪರಂ ಪರೆಯಲ್ಲಾಗಲೀ ಸುಂದರ ಸುರುಚಿ ಪೂರ್ಣ - ಸುಮಧುರ, ಪರತೃಪ್ತ ಜೀವನದ ಆಕರ್ಷಕ ಪುಣ್ಯ ಮೂರ್ತಿಯನ್ನು ಕಾಣಬೇಕಾದರೆ ಅದು ಶ್ರೀರಾಮ ಚಂದ್ರನೇ ಹೊರತು ಬೇರೊಬ್ಬವ್ಯಕ್ತಿ ಇಲ್ಲ ಆತ ಭಗವಂತನಾಗಿ ಕರುಣಾಮೂರ್ತಿ - ಪತಿತಪಾವನ " ಮಾನವನಾಗಿ - **ಪುರುಷೋತ್ತಮ** - ಮರ್ಯಾ **ದಾಪುರುಷೋತ್ತಮ "** ರಾಮಾಯಣ ಕಾವ್ಯ ವೇದ ರಾಮ ಮಾನವದೇವ ಅಥವ ದೇವಮಾನವ ಆತ್ಮಾನಂ ಮಾನುಷಂ ಮನ್ಯೇ - ಎಂದು ರಾಮನೇ ಹೇಳಿರುವುದರಿಂದ ಆತ ಆದರ್ಶಮಹಿ ಮಾಪುರುಷ ಎಂದೇ ಭಾವಿಸಿದರೂ ಆದೀತು

ಕಾವ್ಯಸೌಂದರ್ಯ - ಧರ್ಮಗಾಂಭೀರ್ಯ - ನೀತಿನಿಷ್ಠೆ - ಪಾರಿಶುದ್ಧ - ಈ ನಾಲ್ಕು ಅಂಶಗಳ ಸಂಗಮ ಸ್ಥಳವೇ ಶ್ರೀಮದ್ರಾಮಾಯಣ ಈ ತತ್ವಗಳ ಮಧುರ ಸುಂದರ ಭವ್ಯ ಸಮ್ಮಿ ಶ್ರಣ ಆದಿಕಾವ್ಯದಲ್ಲಾಗಿರುವಂತೆ - ಇನ್ನೆಲ್ಲೂ - ಇನ್ನಾವ ಕಾವ್ಯದಲ್ಲೂ ಆಗಿದೆಯೆಂದು ಧೈರ್ಯ ವಾಗಿ ಹೇಳಲಾಗದು ಒಳ್ಳೆಯದು ಎಂದು ಬಾಳಿ ನಲ್ಲಿ ಏನೇನಿರಬಹುದು-ಅದೆಲ್ಲವನ್ನೂ ಪ್ರಬೋಧಿ ಸುವ ಏಕೈಕ ಕಾವ್ಯ ರಾಮಾಯಣ ನಾರೀಣಾಂ ಉತ್ತಮಾಪಧೂ -ಎಂಬ ಅಗ್ಗಳಿಕೆಗೆ ಪಾತ್ರವಾದ ಸೀತಾದೇವಿಗಿಂತ ಆದರ್ಶಗೃಹಿಣಿ ಜಗತ್ತಿನ ಯಾವ ಇತಿಹಾಸದಲ್ಲೂ ಸಿಕ್ಕಲಾರಳು ಶ್ರೀಮದ್ರಾಮಾ ಯಣವನ್ನು ಪಾರಾಯಣ ಮಾಡುವ ಮುನ್ನ - ಅಧ್ಯಯನ ಮಾಡುವ ಮುನ್ನ, ನಮ್ಮನ್ನು ನಾವೇ



ಧರ್ಮದ ವಾದಮೂಲದಲ್ಲಿ ಸಮರ್ಥಿಸಿಕೊಳ್ಳಬೇಕಾದ್ದು ಅತ್ಯಗತ್ಯ ರಾಮಾಯಣವನ್ನು ಓದುವುದೆಂದರೇನೇ ಭಾವಪರವಶರಾಗುವುದು ಎಂದರ್ಥ ಪ್ರಾರಂಭದ ಶ್ಲೋಕಗಳಲ್ಲೇ ನಮ್ಮನ್ನು ಭವ್ಯತರ ರಸಲೋಕ ಯಾತ್ರೆಗಳೆದೊಯ್ಯುವ ಶಕ್ತಿ ಇದೆ ಈ ಶಕ್ತಿ - ಈ ಸೊಗಸು ಸಮಗ್ರಕಾವ್ಯದ ಜೀವ ನಾಡಿ

ಭಾರತೀಯ ಸಂಸ್ಕೃತಿಯ ಆಧಾರ ಗ್ರಂಥಗಳೆಲ್ಲವೂ ನಷ್ಟವಾಗಿ ಹೋದರೂ ಚಿಂತೆ ಇಲ್ಲ ವಾಲ್ಮೀಕಿ, ವ್ಯಾಸ, ಕಾಳಿದಾಸ, ಈ ತ್ರಿಮೂರ್ತಿಗಳ ಸಾಹಿತ್ಯ ಒಂದೇ –ಸಾಕು ಭಾರತೀಯ ಸಂಸ್ಕೃತಿಯ ವೈಭವವನ್ನು ಮೆರೆಸಲು ಮಾನವ ಹೃದಯದ ಪದರ ಪದರಗಳನ್ನು ಬಿಡಿಸಿ ನೋಡುವ ಶಕ್ತಿಯಲ್ಲಿ, ಬಾಳಿನ ಪದರ ಪದರಗಳನ್ನು ಸುಸ್ಪಷ್ಟವಾಗಿ ಚಿತ್ರಿಸುವ ಸಾಮರ್ಥ್ಯದಲ್ಲಿ, ಜೀವನವನ್ನು ಬಿಡಿಯಾಗಲ್ಲ - ಇಡಿಯಾಗಿ, ಖಂಡ ಖಂಡವಾಗಲ್ಲ - ಅಖಂಡವಾಗಿ ನೋಡುವ ದರ್ಶನದೃಷ್ಟಿಯಲ್ಲಿ, ಈ ಕವಿತ್ರಯರಿಗೆ ಸರಿಸಾಟಿಯಾದವರೇ ಇಲ್ಲವೆಂದರೆ– ಈ ವಿಷಯದಲ್ಲಿ ಅವರನ್ನು ಮಾರಿಸಬಲ್ಲವರಿಲ್ಲವೆಂದು ಪ್ರತ್ಯೇಕವಾಗಿ ಹೇಳುವುದು ಹಾಸ್ಯಾಸ್ಪದವಾದೀತು ಭಾವಪೋಷಣೆಯಲ್ಲಿ, ರಸಪೋಷಣೆಯಲ್ಲಿ - ಸೂಕ್ಷ್ಮಾತಿಸೂಕ್ಷ್ಮ ಅಂಶಗಳನ್ನೂ ಗಮನಿಸುವ ಪ್ರತಿಭಾ ಸಂಪನ್ನತೆಯಲ್ಲಿ ಅಭಿವ್ಯಂಜನಾ ಸಾಮರ್ಥ್ಯದಲ್ಲಿ - ವಸ್ತುವಿಗೆ ಮೆರುಗು ಕೊಡುವ ಕೌಶಲದಲ್ಲಿ, ಜಗತ್ತಿಗೆ ಮಾರ್ಗದರ್ಶನ ಮಾಡುವ ದೊಡ್ಡಸ್ತಿಕೆಯಲ್ಲಿ ಈ ಕವಿತ್ರಯರಿಗೆ ಹೋಲಿಸಲು ಈ ಕವಿತ್ರಯರೇಬೇಕು ಈ ಋಷಿಕವಿಗಳು ಭಾರತೀಯರ ಗೌರವಾನ್ವಿತವಾದ ಹೆಮ್ಮೆಪಡುವಂತಹ ಭವ್ಯತಮ ಸಂಪತ್ತು ಇವರು ರಚಿಸಿದ ಗ್ರಂಥಗಳು ಕೇವಲ ಸಾಹಿತ್ಯಮಹತ್ವವನ್ನು ಮಾತ್ರ ಪಡೆದಿವೆ - ಎಂದರೆ ಅಪಚಾರವಾದೀತು ಅವು ಧರ್ಮದ ಸಂದಾದೀಪಗಳಾಗಿವೆ ಭಗವತ್ ಸ್ವರೂಪವಾಗಿವೆ ಆದಿಕವಿಯ ಕೃತಿರತ್ನವನ್ನು ಒಳಹೊಕ್ಕು ನೋಡಿ, ಕವಿಹೃದಯವನ್ನರ್ಥಮಾಡಿಕೊಂಡರೆಂದರೆ ಆಯ್ತು - ಜಗತ್ತಿನ ಇನ್ನಾವ ಕಾವ್ಯವೂ ಮನಸ್ಸಿಗೆ ಅಷ್ಟಾಗಿ ರುಚಿಸದು ನಿರ್ಮಲ ಮಂದಾಕಿನೀ ತರಂಗಗಳಲ್ಲಿ ಸಂಚರಿಸಿದ ನಂತರ, ರಾಜಹಂಸ, ಹಳ್ಳಿಯ ಕುಂಟೆ ನೀರಿಗಿಳಿಯಲು ಇಷ್ಟಪಡುವುದಿಲ್ಲ" ಮಾನವ ಹೇಗೆ ಬಾಳಬೇಕು - ಹೇಗೆ ಬಾಳಬಾರದು - ಕಿಂಕರ್ತವ್ಯಂ - ಕಿಮಕರ್ತವ್ಯಂ - ಎರಡನ್ನೂ ಬೋಧಿಸುವ ಶ್ರೀಮದ್ರಾಮಾಯಣವನ್ನು - ಶರಣಾಗತಿವೇದ - ಎಂದು ಕರೆದದ್ದು ಕೇವಲ ಹೊಗಳಿಕೆಯ ಮಾತಲ್ಲ– ಭಾವುಕತೆಯ ಕೂಗಲ್ಲ ಅದು ಸತ್ಯಸಂಗತಿ

ಧರ್ಮಸಂಕಟಕ್ಕೆ ಸಿಕ್ಕಿದ ಜೀವ ದಶರಥ ಧರ್ಮಪಾಶೇನ ಬದ್ಧೋಸ್ಮಿ –ಎಂದು ಆತನೇ ಹೇಳಿದ್ದಾನೆ ಇಂತಹ ಸಂದರ್ಭದಲ್ಲಿ ದಾರಿತೋರುವವರಾರು ? ಯಾವ ವ್ಯಕ್ತಿ ಅಪ್ರತಿಹತಪರಾಕ್ರಮಿಯೋ ಅವನೂ ಸಹ ಧರ್ಮ ಸಂಕಟಕ್ಕೆ ಸಿಕ್ಕಿದಾಗ ಬೆಕ್ಕಿನ ಮರಿಯಾಗಿ ಹೋಗುತ್ತಾನೆ ದಶರಥ ಹೇಳಲಾರದ, ತಾಳಲಾರದ ವೇದನೆಯಿಂದ ಒಳಗೇ ಬೆಂದು ಹೋಗುತ್ತಿದ್ದಾನೆ ಕೈಕೆ - ರಾಮ - ಪತ್ನಿ - ಪುತ್ರ - ಇವರಲ್ಲಿ ಯಾರು ತ್ಯಾಜ್ಯ - ಯಾರು ಗ್ರಾಹ್ಯ? ಇವೆರಡೂ ಮಾನವನ ಹೃದಯದ ರಾಗಾತ್ಮಕ ಭಾವನೆಗಳು ಎರಡೂ ಮಧುರವಾಗಿ ಕಾಣುವ ಭಯಂಕರ ವಿಷಗಳು ಒಂದೇನಾಣ್ಯದ ಎರಡು ಮುಖಗಳು ಬಿಸಿತುಪ್ಪದಂತೆ - ನುಂಗಲು ಸಾಧ್ಯವಿಲ್ಲ - ಉಗುಳಲು ಇಷ್ಟವಿಲ್ಲ ದಶರಥ ಎದುರಿಗಿದ್ದ ಕೈಕೆಗೆ ಬಗೆ ಬಗೆಯಲ್ಲಿ ಸಮಾಧಾನ ಹೇಳಿದ ಅಂಗಲಾಚಿ ಕೇಳಿಕೊಂಡ - ಗದರಿಸಿದ - ಬೆದರಿಸಿದ - ವಾದಂ ಸ್ವಶಾಮಿ ಕೈಕೇಯಿ - ನಿನ್ನ ಪಾದಗಳನ್ನು ಹಿಡಿದು ಕೇಳಿಕೊಳ್ಳುತ್ತೇನೆ ಕೈಕೆ –ಎಂದು ದೈನ್ಯತೆಯಿಂದ ಬೇಡಿಕೊಂಡ ಮಕ್ಕಳಿಲ್ಲದಾಗ ಒಂದು ರೀತಿಯಲ್ಲಿ ಚಿಂತೆ ಪಟ್ಟ ಜೀವ, ಮಕ್ಕಳಾದಮೇಲೆ ನಾನಾ ರೀತಿಯ ಚಿಂತೆ ಪಡಬೇಕಾಯ್ತು ವೃದ್ಧಸ್ಯಾಪತ್ ಚಿಂತಾಸಕ್ತಃ ಎಂಬ ಮಾತು ದಶರಥನ ಬಾಳಿನಲ್ಲಿ ಸಾರ್ಥಕವಾಗಿದೆ ಆದರೆ ನಾಡಿನ ಜನತೆಯ ಮುಂದೆ ತಲೆ ಎತ್ತಿಕೊಂಡು ತಿರುಗುವುದು ಹೇಗೆ ? ಗುರುವರ್ಯ ವಸಿಷ್ಠರಿಗೆ ಮುಖ ತೋರುವುದು ಹೇಗೆ? ರಾಮನ ರಾಜ್ಯಾಭಿಷೇಕಕ್ಕೆ ಎಲ್ಲ ಸಿದ್ಧತೆಗಳೂ ನಡೆದಿವೆ ಬೆಳಗಾದ ಕೂಡಲೇ - ಅಂದರೆ ಕೆಲವೇ ಗಂಟೆಗಳಲ್ಲಿ ನಾಂದಿ ಸ್ವಸ್ತಿವಾಚನಾದಿ ಕಾರ್ಯಗಳು ಪ್ರಾರಂಭವಾಗಬೇಕಾಗಿದೆ ಇಂತಹ ಸ್ಥಿತಿಯಲ್ಲಿ - ರಾಮನನ್ನು ವನವಾಸಕ್ಕೆ ಕಳಿಸಬೇಕಾದ ಸನ್ನಿವೇಶ ಒದಗಿಬಂದಿದೆ ದಶರಥನ ಸ್ಥಿತಿಯನ್ನು ಕಲ್ಪನೆ ಮಾಡಿಕೊಂಡರೂ ಸಾಕು - ಕಣ್ಣೀರು ಬರುತ್ತದೆ ಇಷ್ಟಾಗಿ ಕೊಟ್ಟ ಮಾತಿಗೆ ತಪ್ಪಿನಡೆಯುವ ಮನುಷ್ಯನಲ್ಲ - ಅಂತಹ ವಂಶವಲ್ಲ ಅದು ಈ ದಶರಥನಾದರೋ ರಾಜರ್ಷಿ - ಮಹಾನ್ ಸಾಮ್ರಾಜ್ಯಕ್ಕೆ ಅಧಿಪತಿ ಹಣಕಾಸು - ಅಧಿಕಾರ - ಅಷ್ಟೈಶ್ವರ್ಯ - ಚತುರಂಗಸೈನ್ಯ - ದಿಗ್ದಿಗಂತ ವ್ಯಾಪ್ತಧವಳ ಕೀರ್ತಿ ಎಲ್ಲವೂ ಇವೆ ಆದರೆ ಒಂದೇ ಒಂದು ಕೊರತೆ - ಮನಶ್ಶಾಂತಿ ಇಲ್ಲ" ಅದಿಲ್ಲದ ಮೇಲೆ ಏನಿದ್ದು ಏನು ಲಾಭ - ಏನು ಭಾಗ್ಯ?? ಇಂತಹ ಪರಿಸ್ಥಿತಿಯಲ್ಲಿ ದಶರಥ ಕೈಕೆಯನ್ನು ಕುರಿತು ಒಂದು ಮನವಿ ಮಾಡಿಕೊಂಡ

ಜ್ಯೇಷ್ಠಂ ಪುತ್ರಂ ಪ್ರಿಯಂ ರಾಮಂ
ದ್ರಷ್ಟು ಮಿಚ್ಛಾಮಿ ಧಾರ್ಮಿಕಮ್ ||

ಹೊರನೋಟಕ್ಕೆ ಈ ಕವಿವಾಣಿ ಸುಲಭವಾಗಿ ಅರ್ಥವಾಗುತ್ತದೆ ಆದರೆ ಇದರ ಹಿಂದ ಅಡಗಿರುವ ಮಹಾನ್ ಚಿನ್ತನಧಾರೆ ತುಂಬ ಗಂಭೀರವಾದದ್ದು ಇಲ್ಲಿ ಬಳಸಿರುವ ಒಂದೊಂದು ಮಾತೂ ರಾಮನಿಗೆ ವಿಶೇಷಣಗಳೆಂದು ಮಾತ್ರ ಭಾವಿಸುವುದು ಅಷ್ಟು ಸೂಕ್ತವಲ್ಲ

ಜ್ಯೇಷ್ಠಂ ದ್ರಷ್ಟುಮಿಚ್ಛಾಮಿ
ಪುತ್ರಂ ದ್ರಷ್ಟುಮಿಚ್ಛಾಮಿ
ಪ್ರಿಯಂ ದ್ರಷ್ಟುಮಿಚ್ಛಾಮಿ
ರಾಮಂ ದ್ರಷ್ಟುಮಿಚ್ಛಾಮಿ
ಧಾರ್ಮಿಕಂ ದ್ರಷ್ಟುಮಿಚ್ಛಾಮಿ ||

ಹೀಗೆ ಅರ್ಥಮಾಡಬಹುದೇ? ಇದು ವಿಚಾರದ ಒಂದು ಮುಖ ಅಷ್ಟೆ ರಾಮನು ಜ್ಯೇಷ್ಠನು

ಪುತ್ರನೂ ಪ್ರಿಯನೂ ಎಲ್ಲವೂ ಆಗಿದ್ದಾನೆ ನಿಜ ಇದೆಲ್ಲ ವಾತ್ಸಲ್ಯಜನ್ಯ ವ್ಯಾವಹಾರಿಕ ಸಂಬಂಧಗಳಾಯ್ತು ಮನಸ್ಸಿನ ಅನುರಾಗದ ವಿವಿಧ ಮುಖಗಳಾಯ್ತು ಇವೆಲ್ಲ ರಾಮನ ವ್ಯಕ್ತಿತ್ವದ ಒಂದೊಂದು ಭಾಗಗಳು ಇದರಲ್ಲಿ ಅತಿ ಮುಖ್ಯ ಭಾಗವೆಂದರೆ – ಧಾರ್ಮಿಕಮ್ – ಎಂಬ ಮಾತು ಧರ್ಮ ಸಂಕಟಗ್ರಸ್ತ ಜೀವಕ್ಕೆ ತಂಪೆರೆಯುವ – ಸಮಾಧಾನ ಹೇಳುವ – ಬಂದಿರುವ ಸಮಸ್ಯೆಯನ್ನು ಬಗೆಹರಿಸುವ – ಕುಲಮರ್ಯಾದೆಗಳನ್ನು ಎತ್ತಿ ಹಿಡಿಯುವ ಶಕ್ತಿ ಯಾರಿಗುಂಟು? ಕೆಸರಿನಲ್ಲಿ ಸಿಕ್ಕಿಕೊಂಡಿರುವಾತನನ್ನು ಕೆಸರಿನಲ್ಲಿ ಸಿಕ್ಕಿಹಾಕಿಕೊಳ್ಳದೇ ಇರುವ ವ್ಯಕ್ತಿ ಮಾತ್ರ ಕಾಪಾಡಬಲ್ಲ ರಾಮ ಧರ್ಮಮೂರ್ತಿ ರಾಮೋ ವಿಗ್ರಹವಾನ್ ಧರ್ಮಃ ಸಾಧುಸ್ಸತ್ಯಪರಾಕ್ರಮಃ– ಈ ಧರ್ಮಮೂರ್ತಿ ಮಾತ್ರ ಧರ್ಮಸಂಕಟವನ್ನು ಪರಿಹರಿಸಲು ಸಾಧ್ಯ ಆದ್ದರಿಂದಲೇ ದಶರಥ ಈ ಮಾತಾಡಿದ್ದು ಜ್ಯೇಷ್ಠ ಪುತ್ರ – ಪ್ರಿಯಪುತ್ರ – ಧರ್ಮಾತ್ಮನಾದ ಪುತ್ರ – ಧರ್ಮಾತ್ಮ – ರಾಮನ ಈ ಚತುರ್ವಿಧ ವ್ಯಕ್ತಿತ್ವಗಳಲ್ಲಿ ಬಹು ಬೆಲೆಬಾಳುವ ವ್ಯಕ್ತಿತ್ವವೆಂದರೆ – ಧರ್ಮಾತ್ಮ !! ಧರ್ಮ ಎಂಬ ಮಾತಿಗೆ ಇದಮಿತ್ಥಂ – ಎಂದು ವಿವರಣೆ ಕೊಡಲು ಯಾರಿಗೂ ಸಾಧ್ಯವಿಲ್ಲ

ಯಾರೊಡನೆ ಹೇಗೆ ವರ್ತಿಸಿದರೆ ಅವರಿಗೆ ಸಂತೋಷವಾಗುತ್ತದೆ, ಅವರೊಡನೆ ಆ ರೀತಿಯಲ್ಲಿ ವರ್ತಿಸುವುದು ಧರ್ಮ ಬಹುಜನ ಹಿತಾಯ ಬಹುಜನ ಸುಖಾಯ – ಮಾಡುವ ಕೆಲಸಗಳೆಲ್ಲ ಧರ್ಮ ಹೀಗೆಲ್ಲ ಧರ್ಮಕ್ಕೆ ಅನೇಕ ವ್ಯಾಖ್ಯಾನಗಳಿವೆ ಜಗತ್ತು ಈ ಬಗ್ಗೆ ಸಾಕಷ್ಟು ಚರ್ಚೆ ಮಾಡಿದೆ ತಲೆ ಕೆಡುವಷ್ಟು, ತಲೆ ಬಿಸಿಯಾಗುವಷ್ಟು ಚರ್ಚೆಗಳಾಗಿವೆ ಚರ್ಚೆ ತರ್ಕಗಳಿಂದ ಪ್ರಯೋಜನವಿಲ್ಲ ಯಾವ ಯಾವ ಸಂದರ್ಭದಲ್ಲಿ ರಾಮ **ಹೇಗೆ** ವರ್ತಿಸಿದ್ದಾನೆ – ಹೇಗೆ ನಡೆದುಕೊಂಡಿದ್ದಾನೆ – ಎಂಬುದೇ ಧರ್ಮ ಅದನ್ನನುಸರಿಸುವುದೇ ಧರ್ಮ ಶ್ರದ್ಧೆ ಇದರಿಂದ ಮಾತ್ರ ಆಂತರಂಗಿಕ ಶಾಂತಿ ಭಗವದ್ಗೀತೆ ಹೇಳುತ್ತದೆ–

ತ್ಯಾಗಾತ್ ಶಾಂತಿ ರನಂತರಮ್

ಶ್ರೀರಾಮಚಂದ್ರನ ನಡವಳಿಕೆ ಎಲ್ಲ ಈ ಸಿದ್ಧಾಂತವನ್ನು ಬಾಳಿಗೆ ಅನ್ವಯಿಸಿಕೊಂಡದ್ದಲ್ಲದೆ ಮತ್ತೇನು? ನಾನೊಬ್ಬ ವನವಾಸಕ್ಕೆ ಹೊರಟರೆ ಎಲ್ಲ ಸಮಸ್ಯೆ ಬಗೆಹರಿಯಿತು ಬಹುಜನರಿಗೆ ಹಿತವಾಗುತ್ತದೆ – ಸುಖವಾಗುತ್ತದೆ ಎನ್ನುವಾಗ ಹೊರಡಬಾರದೇಕೆ ? ತಂದೆಯ ಮಾತು ಉಳಿಯಿತು ಕುಲಗೌರವ ಉಳಿಯಿತು, ಕೈಕೇಗೆ ಸಂತೋಷವಾಯ್ತು – ನಾನಾ ಜನರಿಗೆ ನಾನಾರೀತಿಯಲ್ಲಿ ಸುಖವಾಗುತ್ತದೆ – ಸಂತೋಷವಾಗುತ್ತದೆ – ಎಂದಾಗ ವನಗಮನ ಕರ್ತವ್ಯವಾಯ್ತಲ್ಲವೇ ? –ಇದು ರಾಮನ ನಿರ್ಣಯದ ಹಿಂದಿರುವ ತತ್ವ ವನಗಮನಕ್ಕೆ ರಾಮಚಂದ್ರ ಕ್ಷಣಾರ್ಧದಲ್ಲಿ ಒಪ್ಪಿಗೆ ಕೊಟ್ಟ ಇಷ್ಟು ಕ್ಲಿಷ್ಟ ಸಮಸ್ಯೆ, ಇಷ್ಟುಬೇಗ ಬಗೆಹರಿಯುತ್ತದೆಂದು ಯಾರೂ ಭಾವಿಸಿರಲಿಲ್ಲ ಕೈಕೆಯಾಗಲೀ – ದಶರಥನಾಗಲೀ ಊಹಿಸಿಯೂ ಇರಲಿಲ್ಲ ರಾಮನಿರ್ವಿಕಾರ ಚಿತ್ತ, ವೀರವಿರಕ್ತ, ಸ ಚ ನಿತ್ಯಂ ಪ್ರಶಾಂತಾತ್ಮ – ಆತ ಯಾವಾಗಲೂ – ಎಂತಹುದೇ ಸಂದರ್ಭದಲ್ಲೂ – ಪ್ರಶಾಂತಮನಸ್ಕ – ಸ್ಥಿತಪ್ರಜ್ಞ ಈ ಮಾನಸಿಕ ಸಮತೋಲನ – ಎಲ್ಲ ವೇದಾಂತದ ಸಾರಸರ್ವಸ್ವ ವೇದಾಂತವೆಂಬುದು ರಾಮನಿಗೆ ಸಿದ್ಧಾಂತ ಮಾತ್ರವಲ್ಲ ಅದು ಆತನ ಬಾಳು ಅದು ಆತನ ಸ್ವಭಾವ ರಾಮ ತೋರಿದ ದಾರಿ – ಎಂಥ ಚೇತೋಹಾರಿ!! ಅಪರಿಮಿತ ಐಶ್ವರ್ಯ – ಅಖಂಡ ಸಾಮ್ರಾಜ್ಯ – ಇದು ರಾಮನ ದೃಷ್ಟಿಯಲ್ಲಿ ದೊಡ್ಡ ವಸ್ತುಗಳಲ್ಲವೇ ಅಲ್ಲ ಇಷ್ಟೆಲ್ಲ ಬಿಟ್ಟು ಹೋಗುವುದು ಆತನಿಗೆ ಕಷ್ಟವೂ ಅಲ್ಲ ಕೊಟ್ಟು ಹೋಗುವುದಾದರೂ ಯಾರಿಗೆ – ಸೋದರ ಭರತನಿಗೆ!! ಇದು ಆತನ ಧೀರೋದಾತ್ತ ಭ್ರಾತೃವಾತ್ಸಲ್ಯ ದಶರಥನ ಸಂಕುಚಿತ ಪುತ್ರವಾತ್ಸಲ್ಯಕ್ಕೂ, ಶ್ರೀರಾಮಚಂದ್ರನ ಉದಾತ್ತವಾತ್ಸಲ್ಯಕ್ಕೂ ಅಜಗಜಾಂತರವಿದೆ

ಅಯಾಚಿತವಾಗಿ ಕೈಗೆ ಬಂದ ಅಪಾರ ಐಶ್ವರ್ಯವನ್ನು ಅಖಂಡ ಸಾಮ್ರಾಜ್ಯವನ್ನು ಬೇಡವೆನ್ನುವ ಜನ ಉಂಟೇ? ಇಲ್ಲ – ಕಲಿಯುಗದಲ್ಲಿ!! ಇದ್ದರು – ತ್ರೇತಾಯುಗದಲ್ಲಿ!! ಆದಿ ಕವಿ ತನ್ನ ಅಮರ ಕಾವ್ಯದಲ್ಲಿ ಸಾಕೇತ – ಕಿಷ್ಕಿಂಧೆ –ಲಂಕೆ – ಮೂರು ಸಾಮ್ರಾಜ್ಯಗಳ ಕಥೆಯನ್ನು ಹೆಣೆದಿದ್ದಾನೆ ಮೂರೂ ಕಡೆ ಅಣ್ಣ ತಮ್ಮಂದಿರಿದ್ದಾರೆ ಆದರೆ ಅವರವರ ಶೀಲ ಸ್ವಭಾವಗಳು ಬೇರೆ ಬೇರೆಯಾಗಿವೆ ಅವರವರ ಸಂಸ್ಕಾರಗಳು ಬೇರೆ ಬೇರೆಯಾಗಿವೆ ಭರತನಂತಹ ಲೋಕೋತ್ತರ ವ್ಯಕ್ತಿ ಜಗತ್ತಿನ ಇನ್ನಾವ ಸಾಹಿತ್ಯದಲ್ಲಾದರೂ ಇದ್ದಾನೆಯೆ? ಇದ್ದರೂ ಸಹ ಆದಿಕಾವ್ಯದಲ್ಲಿರುವಷ್ಟು ಗೌರವಾನ್ವಿತನಾಗಿದ್ದಾನೆಯೆ?

ತ್ಯಾಗಭಾವ ಕುಗ್ಗಿ ಭೋಗಭಾವ ತಲೆ ಎತ್ತುವುದು, ವಿನಯ ವಿವೇಕಗಳು ಕುಗ್ಗಿ, ದುರಹಂಕಾರ ತಲೆ ಎತ್ತುವುದು, ಉಪಕಾರ ಸ್ಮರಣೆ ಕುಗ್ಗಿ – ಉಂಡಮನೆಗೆರಡು ಬಗೆಯುವ ನೀಚ ಪ್ರವೃತ್ತಿ ತಲೆ ಎತ್ತುವುದು – ಸಮರಸಜೀವನದ ಸೊಗಸು ಕಾಣುವ ಸಂಸ್ಕಾರವಿಲ್ಲದೆ – ಅಧಿಕಾರ ಚಲಾವಣಾಮನೋಭಾವ ತಲೆ ಎತ್ತುವುದು – ಸರ್ವನಾಶಕ್ಕೆ ಮುಂಚೆ ಕಾಣುವ – ಪೂರ್ವಸೂಚನೆಗಳು – ಎಂಬ ತತ್ವವನ್ನು ಆದಿಕವಿ ವಾಲ್ಮೀಕಿ, ಹಲವಾರು ಸನ್ನಿವೇಶಗಳಲ್ಲಿ ಸೂಕ್ಷ್ಮವಾಗಿ ಪ್ರಸ್ತಾಪಿಸಿದ್ದಾನೆ **ಸೇವಾ** ಮನೋಭಾವ – ಆದರ್ಶದಾಂಪತ್ಯ – ಸರಳ ಜೀವನ - - ಭವ್ಯ ಚಿನ್ತನ – ಸುರುಚಿಪೂರ್ಣವಾದ ಬಾಳು – ಕರುಣೆ – ಭಕ್ತಿ – ಆಜ್ಞಾಪಾಲನೆ – ವಿನಯ – ಕೃತಜ್ಞತಾಭಾವ – ಧರ್ಮಾಧರ್ಮ ವಿವೇಚನೆ – ವಿವೇಕ ವೈರಾಗ್ಯ, ಯೋಗಯುಕ್ತವಾದ ಜೀವನ ಕ್ರಮ – ಲೋಕಕಲ್ಯಾಣ ಇತ್ಯಾದಿ ಅಂಶಗಳೆಲ್ಲ ರಾಮಾಯಣದಲ್ಲಿ ವಿವಿಧ ಪಾತ್ರಗಳಾಗಿ ಬಂದಿದೆ ಕವಿಯ ಉದಾತ್ತ ಭಾವನೆಗಳೇ ತಾನೇ ಅವನ ಮಹಾಕಾವ್ಯದ ಪಾತ್ರಗಳು!!

ಸತ್ಯ ಶಿವ ಸೌಂದರ್ಯಗಳ ಮಧುರ ಸಮ್ಮಿಶ್ರಣವಾದ ಆದಿಕಾವ್ಯದ ಸೊಗಸು ಸ್ವಾರಸ್ಯಗಳಿಗೆ ಇಂತಿಷ್ಟು ಎಂದು ಚೌಕಟ್ಟು ವಿಧಿಸಲು ಸಾಧ್ಯವಿಲ್ಲ

ಒಂದು ಮಹಾಸಾಗರ ಅದರ ತೀರದಲ್ಲಿ ಹಲವಾರು ಮಂದಿ ನಿಂತಿದ್ದಾರೆ ಎಲ್ಲರೂ ಸಾಗರವನ್ನು ಕುತೂಹಲದಿಂದ ನೋಡುತ್ತಿದ್ದಾರೆ ದರ್ಶಕವರ್ಗದಲ್ಲಿ ಕವಿ, ವಿಜ್ಞಾನಿ – ಜ್ಞಾನಿ – ಭಕ್ತ – ವೇದಾಂತಿ – ಸಾಮಾನ್ಯಮಾನವ – ಶಾಸ್ತ್ರಜ್ಞ ಹೀಗೆ ನಾನಾ ತರಹದ ಜನ ಇದ್ದಾರೆ ಉತ್ತಾಲತಾಲತರಂಗ ಶೋಭಿತ ಜಲಧಿಯನ್ನು ಕವಿ ತನ್ನ ರೀತಿಯಲ್ಲಿ ಬಣ್ಣಿಸಿದ ವಿಜ್ಞಾನಿ ಅದರಲ್ಲಿ ಏನೇನು ವಸ್ತುಗಳಿರಬಹುದು – ಲವಣಾಂಶವೆಷ್ಟು ಎಂದೆಲ್ಲ ಯೋಚಿಸಿದ ಭಕ್ತ ಇದು ಜಗದೀಶ್ವರನ ಕರುಣೆಯಷ್ಟು ಅಪಾರವಾಗಿದೆ ಎಂದುಕೊಂಡ ವೇದಾಂತಿ ಸೃಷ್ಟಿರಹಸ್ಯವನ್ನೆಲ್ಲ ಕುರಿತು ಯೋಚಿಸಿದ – ಶಾಸ್ತ್ರಜ್ಞನಾದಾತ ಅದರಲ್ಲಿರುವ ಬಗೆ ಬೆಗೆಯ ಪ್ರಾಣಿಗಳು – ಅವುಗಳ ರಚನೆ – ಸ್ವಭಾವ ಚೇಷ್ಟೆಗಳು ಎಲ್ಲವನ್ನೂ ಯೋಚನೆ ಮಾಡಿದ – ಸಾಮಾನ್ಯಮನುಷ್ಯ ಆ ಅದ್ಭುತವನ್ನು ಬೆಕ್ಕಸ ಬೆರಗಾಗಿ ನೋಡುತ್ತನಿಂತ ಮೂಕ ವಿಸ್ಮಿತನಾಗಿ

ಈ ಮಾತು ಆದಿಕವಿ ವಾಲ್ಮೀಕಿಯ ಅಮರ ಕಾವ್ಯಕ್ಕೂ ಅನ್ವಯಿಸುತ್ತದೆ ರಾಮಾಯಣವೊಂದು ಸಾಗರ ರಸಸಾಗರ ಯಾರು ಬೇಕಾದರೂ ಹೇಗೆ ಬೇಕಾದರೂ ಅದರ ಬಗ್ಗೆ ಯೋಚನೆ ಮಾಡಬಹುದು ಅದರ ಬಗ್ಗೆ ಯೋಚನೆ ಮಾಡುವುದೇ ಒಂದು ಬಗೆಯ ರಸತಪಸ್ಸೆ ಬಾಳಿನ ಇಂತಹ ಸುಂದರ ವಿಸ್ತೃತ ವಿನ್ಯಾಸವನ್ನು ಚಿತ್ರಿಸಿದ ಕವಿ ಪ್ರತಿಭೆಗೆ, ಋಷಿ ಪ್ರಜ್ಞೆಗೆ ಸಹೃದಯ ಜಗತ್ತು ತಲೆದೂಗುತ್ತದೆ – ತಲೆ ಬಾಗುತ್ತದೆ

ವನ್ದೇ ವಾಲ್ಮೀಕಿ ಕೋಕಿಲಂ
ರಮ್ಯಂ ಸ್ತುತ್ಯಂ ತತ್ಕಾವ್ಯವೈಭವಮ್ ||

*

**ವಿದ್ವಾನ್ ಬ ನ ಗುಂಡೂರಾವ್**

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ)ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ, ಕ್ಯಾಂಟೀನ್
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ**

ಗಮನಿಕೆ ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮-೩೦ ಗಂಟೆಯವರೆಗೆ ಕೆಲಸಮಾಡುತ್ತದೆ ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧-೦೦ ಗಂಟೆಯವರೆಗೆ ಕೆಲಸಮಾಡುತ್ತದೆ

# ಶಬರಿಮಲೆ ಸ್ವಾಮಿ

ಆರ್ ಜಿ ಶ್ಯಾನಭಾಗ

ಅಯ್ಯಪ್ಪಸ್ವಾಮಿಯ ಆರಾಧನೆ ಭಕ್ತಿ ಪ್ರಸಾರ ಆಂದೋಲನದಿಂದ ಇತ್ತೀಚಿನ ದಿನಗಳಲ್ಲಿ ವ್ಯಾಪಕವಾಗಿ ಜನಾದರಣೀಯಗೊಳ್ಳುತ್ತಿವೆ ಅಯ್ಯಪ್ಪಸ್ವಾಮಿ ಬೇಡಿದವರ ಪಾಲಿಗೆ ಕಾಮಧೇನು ಬದುಕಿನ ಹತ್ತಾರು ಆಸೆಗಳನ್ನು ಹೊತ್ತುಕೊಂಡು ಶ್ರೀಕ್ಷೇತ್ರ ಶಬರಿಮಲೆಗೆ ವ್ರತನಿಷ್ಠರಾಗಿ ಬಂದ ಭಕ್ತ ಭಜಕರ ಅಭೀಷ್ಟಗಳನ್ನು ಕ್ಷೇತ್ರದಲ್ಲಿಯ ಅಯ್ಯಪ್ಪಸ್ವಾಮಿ ಈಡೇರಿಸುತ್ತಾನೆ ಎಂಬ ನಂಬಿಗೆ ಆಳವಾಗಿ ಬೇರೂರಿದೆ



ಅಯ್ಯಪ್ಪಸ್ವಾಮಿಯ ಮಹಾತ್ಮೆಯು ಕೇರಳದಲ್ಲಿ ಉಪಲಬ್ಧವಿರುವ ಪುರಾತನ ಸಂಸ್ಕೃತ ಗ್ರಂಥವಾದ ಭೂತನಾಥೋಪಾಖ್ಯಾನದಲ್ಲಿ ಬರುವುದು ಮಕರ ಸಂಕ್ರಾಂತಿಯಂದು ಪರಶುರಾಮ ಮುನಿಯು ಸ್ವಾಮಿ ಅಯ್ಯಪ್ಪನ ಮೂರ್ತಿಯನ್ನು ಸ್ಥಾಪಿಸಿರುವ ಉಲ್ಲೇಖ ಈ ಗ್ರಂಥದಲ್ಲಿದೆ ಅಯ್ಯಪ್ಪಸ್ವಾಮಿಯ ಕುರಿತಾಗಿರುವ ಚರಿತ್ರೆ ರೋಚಕವೂ ಹಾಗೂ ರೋಮಾಂಚಕವೂ ಆಗಿದೆ



## ದೈವ ಪುತ್ರ ಪ್ರಾಪ್ತಿ

ಪಾಂಡಲಂ ದೇಶದ ಪಾಂಡ್ಯ ವಂಶದ ದೊರೆ ರಾಜರಾಜಶೇಖರ ಧೀರ ಹಾಗೂ ಧೀಮಂತನಾಗಿದ್ದನು ಅವನ ಸಾಮ್ರಾಜ್ಯದಲ್ಲಿ ಸುಖ ಸಮೃದ್ಧಿ ಶಾಂತಿಗಳು ನೆಲೆಸಿದ್ದವು ಅರಸು ದೀರ್ಘ ಕಾಲದವರೆಗೆ ನೀಡುವಂತನಾಗಿದ್ದನು ಮುಂದಿನ ಅರಸುತನಕ್ಕೆ ಉತ್ತರಾಧಿಕಾರಿಗಳಿಲ್ಲವೆಂದು ಪ್ರಜೆಗಳು ಕೊರಗುತ್ತಲೇ ಇದ್ದರು ಕೊರಗು ಕೊರತೆಗಳಿಂದ ವ್ಯಥಿತರಾದ ರಾಜದಂಪತಿಗಳು ತಮಗೆ ಪುತ್ರ ಸಂತಾನ ಪ್ರಾಪ್ತವಾಗಬೇಕೆಂದು ಪಶುಪತಿಯನ್ನು ಪ್ರಾರ್ಥಿಸ ತೊಡಗಿದರು ವ್ರತನಿಷ್ಠರಾಗಿ ತನ್ನನ್ನು ಆರಾಧಿಸುತ್ತಿರುವ ರಾಜದಂಪತಿಗಳ ಮೇಲೆ ಶಿವನು ಕಣ್ಣು ತೆರೆದುದರಿಂದ ಘಟನೆಯೊಂದು ಜರುಗಿ ಭರವಸೆಯ ಆಶಾಕಿರಣಗಳು ಅವರಲ್ಲಿ ಮೂಡಿದವು

ಒಂದು ದಿನ ರಾಜನು ಪಂಪಾನದಿಯ ತೀರದ ಮೇಲಿರುವ ದಟ್ಟ ಕಾಡಿನಲ್ಲಿ ಬೇಟೆಗೆಂದು ಹೋಗಿದ್ದನು ಬೇಟೆಯಿಂದ ದಣಿದಿದ್ದ ರಾಜನು ವಿಶ್ರ

ಮಿಸಲು ಕುಳಿತಾಗ ತಬ್ಬಲಿಯಾಗಿರುವ ಹಾಲುಗಲ್ಲದ ಮಗುವಿನ ಆರ್ತನಾದ ಅರಸನ ಕಿವಿಯ ಮೇಲೆ ಬಿದ್ದಿತು ಕಾಲನ್ನು ಅಲುಗಾಡಿಸುತ್ತ ಅಳುತ್ತಿರುವ ಮಗು ದೊರೆಯ ಚಿತ್ತವನ್ನಾಕರ್ಷಿಸಿತು ಮಗುವನ್ನು ಎತ್ತಿಕೊಳ್ಳಲೋ ಎಂದು ಅನುಮಾನದಿಂದ ಯೋಚಿಸುತ್ತಿದ್ದಂತೆ ಸನ್ಯಾಸಿಯೋರ್ವನು ಅಲ್ಲಿಗೆ ಬಂದನು

ಅನುಮಾನಿಸಿ ತಬ್ಬಲಿ ಮಗುವನ್ನು ಎತ್ತಿಕೊಳ್ಳಲು ಧೃತಿಗೆಟ್ಟ ದೊರೆಗೆ ಮಗುವಿನ ಪೋಷಕನಾಗಲು ಸನ್ಯಾಸಿಯು ಧೈರ್ಯವನ್ನು ನೀಡಿ ಆಶೀರ್ವದಿಸಿದ ಈ ಮಗು ಕ್ಷತ್ರಿಯ ವಂಶಕ್ಕೆ ಸೇರಿದ್ದಾದ್ದರಿಂದ ನಿನ್ನ ಬದುಕಿನಲ್ಲಿ ಆವರಿಸಿರುವ ಕಷ್ಟ ಕಾರ್ಪಣ್ಯಗಳನ್ನು ನಿವಾರಿಸುವ ಸಾಮರ್ಥ್ಯ ಹೊಂದಿದೆ ಮಗುವಿನ ಕೊರಳಿಗೆ ಚಿನ್ನದ ಸರವಿರುವುದರಿಂದ ಇದಕ್ಕೆ ಮಣಿಕಂಠ ಎಂದು ಹೆಸರಿಡು ತನ್ನ ಹನ್ನೆರಡನೇ ವಯಸ್ಸಿನಲ್ಲಿ ಮಗುವಿನಿಂದ ದೈವೀ ಚರಿತ್ರೆಯು ಘಟಿಸುವುದೆಂದು ಹೇಳಿ ಸನ್ಯಾಸಿ ಮಾಯವಾದನು

ಸಕಲ ರಾಜ ಮರ್ಯಾದೆಯೊಂದಿಗೆ ತಬ್ಬಲಿ ಮಗುವನ್ನು ಅರಮನೆಗೆ ತಂದು ಪ್ರಜೆಗಳನ್ನು ಬರಮಾಡಿ ಮುಂದೆ ಈ ರಾಜ್ಯಕ್ಕೆ ಮಗು ಉತ್ತರಾಧಿಕಾರಿಯಾಗುವನೆಂದು ರಾಜ ಘೋಷಿಸಿದ, ಪ್ರಜೆಗಳು ಸಂತೋಷಗೊಂಡರು

ರಾಜ್ಯದ ದಿವಾನ ಅರಸನು ನಿಷ್ಪುತ್ರನಾದುದರಿಂದ ತಾನೇ ಸಿಂಹಾಸನದ ಉತ್ತರಾಧಿಕಾರಿಯಾಗುವನೆಂಬ ಲೆಕ್ಕಚಾರಗಳೆಲ್ಲವೂ ತಲೆಕೆಳಗಾದವು ದಿವಾನನು ಚಿಂತಾಕ್ರಾಂತನಾದನು

ಮಣಿಕಂಠ ಎಂಬ ಹೆಸರನ್ನು ಪಡೆದ ಮಗು ಗುರುಗಳಿಂದ ಸಕಲ ಶಸ್ತ್ರ ವಿದ್ಯೆ ಹಾಗೂ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಪಾರಂಗತವಾಯಿತು ವ್ಯಾಸಂಗ ಮುಗಿಸಿ ಅರಮನೆಗೆ ಹೋಗುವ ಮೊದಲು ಗುರುದಕ್ಷಿಣೆ ಕೊಡುವ ಕಾಲ ಸಮೀಪಿಸಿತು ಮಣಿಕಂಠನು ದೈವೀ ಅವತಾರಿ ಎನ್ನುವುದನ್ನು ಗುರುಗಳು ಮೊದಲೇ ಅರಿತಿದ್ದರು ಗುರುದಕ್ಷಿಣೆಯ ಬದಲಾಗಿ ತನ್ನ ಏಕಮೇವ ಅಂಧ ಪುತ್ರನಿಗೆ ನೇತ್ರದಾನವನ್ನು ನೀಡಲು ಗುರುಗಳು ಕೇಳಿದರು ಮಣಿಕಂಠನು ಗುರುವಿನ ಮಗನ ತಲೆಯ ಮೇಲೆ ಕೈಯಿಟ್ಟೊಡನೆ ಅವನಿಗೆ ದೃಷ್ಟಿ ಬಂದಿತು

ನಡು ಮಧ್ಯದಲ್ಲಿ ರಾಜರಾಜ ಶೇಖರನಿಗೆ ಪುತ್ರ ಸಂತತಿಯಾಯಿತು ಆ ಮಗುವಿಗೆ ಮಣಿಕಂಠ ರಾಜರಾಜನೆ ಎಂಬ ನಾಮಕರಣವೂ ಆಯಿತು ಮಣಿಕಂಠನ ಪ್ರತಿಭೆಯನ್ನು ಮೆಚ್ಚಿದ ದೊರೆ ಅವನು ತನ್ನ ಮೊದಲನೇ ಮಗವು, ಅವನೇ ತನ್ನ ಉತ್ತರಾಧಿಕಾರಿಯೆಂದು ಮೊದಲೇ ತೀರ್ಮಾನಿಸಿದ್ದನು ಅವನ ರಾಜ್ಯಾಭಿಷೇಕಕ್ಕಾಗಿ ಸಕಲ ಸಿದ್ಧತೆಯನ್ನು ನಡೆಸಲು ದೊರೆ ದಿವಾನನಿಗೆ ಆಜ್ಞಾಪಿಸಿದನು

ಕಪಟಿಯಾದ ದಿವಾನನು ಮಣಿಕಂಠನಿಗೆ ವಿಷ ಪ್ರಾಶನ ಮಾಡಿಸಿದ ಎಲ್ಲ ಪ್ರಯತ್ನಗಳನ್ನು ಪರಶಿವನು ನಿಷ್ಫಲಗೊಳಿಸಿದನು ಶಿವನು ವೈದ್ಯನ ವೇಷವನ್ನು ಧರಿಸಿ, ಮಗುವಿನ ಪ್ರಾಣವಾಯುಕ್ಕೆ ಉಂಟಾದ ಅಡ್ಡಿಯನ್ನು ನಿವಾರಿಸಿದನು

### ಕಪಟನಾಟಕ

ವಿಫಲಗೊಂಡ ದಿವಾನ ರಾಣಿಯೊಡನೆ ಸೇರಿ ಹೊಸ ಪಿತೂರಿಯನ್ನು ನಡೆಸಿದನು ತಾನು ಹೂಡಿರುವ ಕಪಟ ನಾಟಕದಲ್ಲಿ ರಾಣಿಗೆ ನಟನೆಯ ಪಾತ್ರವನ್ನು ನಿರ್ವಹಿಸಲು ದಿವಾನ ದುರ್ಬೋಧನೆಯನ್ನು ನೀಡಿದನು ತಲೆ ನೋವಿನ ನಟನೆಯನ್ನು ಮಾಡಿ ಅದನ್ನು ಗುಣಪಡಿಸಲು ಹೆಣ್ಣು ಹುಲಿಯ ಹಾಲನ್ನು ತರಲು ಮಣಿಕಂಠನಿಗೆ ಒತ್ತಾಯಿಸಲು ರಾಣಿಗೆ ದುರುಳ ದಿವಾನ ನಿರ್ದೇಶಿಸಿದನು, ಮೃತ್ಯು ದವಡೆಯಲ್ಲಿ ಮಣಿಕಂಠನನ್ನು ದೂಡಲೋಸುಗವೇ ಈ ಕಪಟ ನಾಟಕವನ್ನು ಹೂಡಲಾಗಿತ್ತು

ರಾಣಿಯು ತಲೆನೋವಿನಿಂದ ನರಳುತ್ತಿದ್ದಂತೆ ನಟಿಸಿದಾಗ ಅವಳು ಕಿರುಚುವುದು ದೊರೆಗೆ ಅಸಹನೀಯವಾಗಿತ್ತು ಅವಳ ವೇದನೆ ವಾಸಿ ಮಾಡಲು ಹೆಣ್ಣು ಹುಲಿಯ ಹಾಲಿನಿಂದ

---

*******************************************

## ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ ತಿ ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು ಇದಕ್ಕಾಗಿ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ, ಪಂಚಲೋಹ, ವಿಗ್ರಹಗಳನ್ನೂ ಒದಗಿಸಲಾಗುವುದು ಇದಕ್ಕಾಗಿಯೂ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು ಹಣದ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮ ಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅಭ್ಯರ್ಥಿಗಳಿಗೇ ಸೇರಿದ್ದು

ಕಾಲದಿಂದ ಕಾಲಕ್ಕೆ ತಿ ತಿ ದೇ ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತು ಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ-

ಕಾರ್ಯನಿರ್ವಹಣಾಧಿಕಾರಿ, ತಿ ತಿ ದೇ ತಿರುಪತಿ-೫೧೭೫೦೧

*******************************************

ಮಾತ್ರವೇ ಸಾಧ್ಯವೆಂದು ಅವಳನ್ನು ಪರೀಕ್ಷಿಸಿದ ವೈದ್ಯನಿಂದ ಉತ್ತರ ಬಂದಿತು ಹೆಣ್ಣು ಹುಲಿಯ ಹಾಲನ್ನು ತರುವ ಪ್ರಜೆಗಳ ಪ್ರಯತ್ನ ಫಲಿಸದಾದಾಗ ರಾಜನು ಇನ್ನೂ ಚಿಂತಾಕ್ರಾಂತನಾದನು ತಂದೆಯ ವ್ಯಥೆಯನ್ನರಿತು ಮಣಿಕಂಠ ತಾನು ಈ ಕಾರ್ಯವನ್ನು ಮಾಡಲು ಕಾಡಿಗೆ ಹೋಗುವುದಾಗಿ ತಂದೆಗೆ ಹೇಳಿದನು ಉತ್ತರಾಧಿಕಾರಿಯಾಗುವ ರಾಜಕುಮಾರ ಮಣಿಕಂಠನನ್ನು ಕಳುಹಿಸುವ ಮನಸ್ಸು ಅರಸನಿಗಿರಲಿಲ್ಲ ಅರಸನು ನಿರುಪಾಯನಾಗಿ ಮಣಿಕಂಠನಿಗೆ ಹೆಣ್ಣು ಹುಲಿಯ ಹಾಲನ್ನು ತರಲು ಕಾಡಿಗೆ ಕಳುಹಿಸಿದನು ಧೈರ್ಯಕ್ಕಾಗಿ ಅವನೊಂದಿಗೆ ಪರಿವಾರವನ್ನು ಕಳುಹಿಸುವ ಅರಸನ ಪ್ರಸ್ತಾಪವನ್ನು ಮಣಿಕಂಠನು ತಿರಸ್ಕರಿಸಿದನು ಮುಕ್ಕಣ್ಣನ ನೆನಪಿಗಾಗಿ ತಂದೆ ಅವನಿಗೆ ತೆಂಗಿನಕಾಯಿಯನ್ನು ನೀಡಿದನು ಅನುಗ್ರಹಿಸಿದ ಶಿವನು ಪಂಚಭೂತಗಳನ್ನು ಮಣಿಕಂಠನ ಜೊತೆಗೆ ಕಳುಹಿಸಿದನು



ದಾರಿ ಕ್ರಮಿಸುವಾಗ ದೇವಲೋಕದಲ್ಲಿ ಮಹಿಷಿಯ ಅತಿಕ್ರೂರ ವರ್ತನೆಯನ್ನು ತಾಳಲಾರದೆ ಅವಳ ಸಂಹಾರಕ್ಕಿಳಿದನು ಅವಳ ಎದೆಯ ಮೇಲೆ ಭೈರವ ನರ್ತನ ಮಾಡಿ ಕೊನೆಯುಸಿರೆಳೆಯುವಂತೆ ಮಾಡಿದನು ಇವನು ಬೇರೆ ಯಾರೂ ಅಲ್ಲದೆ ಹರಿಹರನ ಮಗನೆಂದು ತಿಳಿದು ಮಹಿಷಿ ಅವನನ್ನು ನಮಸ್ಕರಿಸಿ ಅಸು ನೀಗಿದಳು ಶಿವನು ಮಣಿಕಂಠನಿಗೆ ನೆರವನ್ನು ನೀಡಲಾರಂಭಿಸಿದನು ಇಂದ್ರನನ್ನು ಹಾಗೂ ದೇವತೆಗಳಿಗೆ ಈ ಕಾರ್ಯಕ್ಕೆ ಅಣಿಗೊಳಿಸಿದನು ದೇವತೆಯರು ಹೆಣ್ಣು ಹುಲಿಯ ರೂಪವನ್ನೂ ದೇವತೆಗಳೂ ಗಂಡು ಹುಲಿಗಳ ರೂಪವನ್ನೂ ತಾಳಿದರು ಹುಲಿಯ ರೂಪವನ್ನು ಧರಿಸಿರುವ ದೇವೇಂದ್ರನ ಮೇಲೆ ಮಣಿಕಂಠ ಸವಾರಿ ಮಾಡುತ್ತ ಅರಮನೆಯತ್ತ ಪ್ರಯಾಣ ಮಾಡಿದನು ಅರಮನೆಯ ಸುತ್ತಣ ಪ್ರದೇಶ ಹುಲಿಗಳಿಂದ ಗರ್ಜನೆಗೊಂಡು ಕಾಡಿನಂತೆ ಗೋಚರವಾಯಿತು ಜನರು ಸ್ತಂಭೀಭೂತರಾದರು ಅರಸನು ತನ್ನ ಕಣ್ಣುಗಳನ್ನು ತಾನು ನಂಬದಾದನು ತಾಯಿಗಾಗಿ ಹಾಲುಗರೆಯಲು ಹುಲಿಗಳನ್ನೇ ತಂದಿರುವುದಾಗಿ ಮಗ ತಂದೆಗೆ ಹೇಳಿದಾಗ ರಾಜ ಮಗನಾದ ಮಣಿಕಂಠನ ಕಾಲ ಮೇಲೆ ಬಿದ್ದು ಕ್ಷಮೆಯಾಚಿಸಿದನು ರಾಣಿಯ ರೋಗ ನೀನು ಕಾಡಿಗೆ ಹೋದಾಗಲೇ ವಾಸಿಯಾಯಿತೆಂದು ಹೇಳಿದನು ಇದು ಶಿವನೆಸೆದಿರುವ ಪವಾಡವೇ ಆಗಿರಬೇಕೆಂದು ಮನಸಿನಲ್ಲಿಂತು ಮಣಿಕಂಠನು ಸ್ಮರಿಸಿಕೊಂಡನು ಈ ದೈವೀಘಟನೆ ನಡೆದಾಗ ಮಣಿಕಂಠನಿಗೆ ಹನ್ನೆರಡು ವರ್ಷ ತುಂಬಿತ್ತು ನಡೆದಿರುವ ಘಟನೆ ದೈವೇಚ್ಛೆಯೇ ಆಗಿರುವುದೆಂದು ಮಣಿಕಂಠ ತಂದೆಯನ್ನು ಸಮಾಧಾನಗೊಳಿಸಿದನು



ನನ್ನ ಘನಕಾರ್ಯವು ಈಗ ಮುಗಿದಿದೆ ನಾನು ದೇವಲೋಕದೆಡೆಗೆ ಹೋಗಬೇಕಾಗಿದೆ ಎಂದಾಗ ರಾಜನು ಮಣಿಕಂಠನ ಜ್ಞಾಪಕಾರ್ಥವಾಗಿ ದೇವಾಲಯವನ್ನು ಕಟ್ಟಲು ಇಚ್ಛಿಸಿದನು ಇದಕ್ಕಾಗಿ ಸೂಕ್ತ ತಾಣವನ್ನು ತೋರಿಸು ಎಂದಾಗ ಮಣಿಕಂಠನು ಬಾಣವನ್ನು ಪ್ರಯೋಗಿಸಿ ದೇವಾಲಯ ಮೂಡಿ ಬರಬೇಕಾದ ತಾಣವನ್ನು ಗುರುತಿಸಿದನು

ಶ್ರೀರಾಮನ ಪರಮಭಕ್ತೆಯಾದ ಶಬರಿಯು ತಪ ಗೈದ ಪಾವನತರ ತಾಣ ಇದಾಗಿತ್ತು ಕಲಿಯುಗ ದಲ್ಲಿ ಇದೊಂದು ಶಬರಿಮಲೆ ಎಂಬ ಕ್ಷೇತ್ರವಾಗಿ ಬೆಳಗಲಿ ಎಂದು ಮಣಿಕಂಠನನು ಹರಸಿ ದನು ಅಗಸ್ತ್ಯ ಮುನಿಗಳು ಶಬರಿಮಲೆ ದೇವಾಲಯಕ್ಕೆ ನೀಲಿ ನಕ್ಷೆಯನ್ನು ಎಳೆದು ಅದನ್ನು ಕಟ್ಟಿಸಿದರು ಮಕರ ಸಂಕ್ರಾಂತಿಯ ಂದು ಪರಶುರಾಮ ಮುನಿಯು ಸ್ವಾಮಿ ಅಯ್ಯಪ್ಪನ ಮೂರ್ತಿಯನ್ನು ಪ್ರತಿಷ್ಠಾಪಿಸಿದರು ದೇವಾಲಯಕ್ಕೆ ಹದಿನೆಂಟು ಮೆಟ್ಟಲುಗಳನ್ನು ನಿರ್ಮಿಸಲಾಗಿತ್ತು

### ಕಂಕಣಬದ್ಧ ವ್ರತಾವಲಂಬನೆ

ನಲವತ್ತೊಂದು ದಿನಗಳವರೆಗೆ ಕಠಿಣವಾದ ವ್ರತವನ್ನು ಆಚರಿಸಿ ಸಂಸಾರದ ಆಸೆಯಿಂದ, ರುಚಿಯಿಂದ ದೂರವಾಗಿದ್ದು ಬ್ರಹ್ಮಚಾರಿಯಂತಿದ್ದು ಒಳ್ಳೆಯದನ್ನೇ ನೆನಪಿಸುವ ಸ್ವಾಮಿಯ ದರ್ಶನಕ್ಕೆ ಬರುವಾಗ ಮುಕ್ಕಣ್ಣಿನ ತೆಂಗಿನಕಾಯಿ ಹಾಗೂ ಆಹಾರ ಪದಾರ್ಥಗಳನ್ನು ತಲೆಯ ಮೇಲಿಟ್ಟುಕೊಂಡು ಮಾಲೆಯನ್ನು ಧರಿಸಿ ಪಂಪಾನದಿಯಲ್ಲಿ ಮಿಂದು ಶುಚೀರ್ಭೂತರಾಗಿ ಶರಣು ಎಂದು ಶಬರಿಮಲೆ ದೇವಾಲಯದ ಹದಿನೆಂಟು ಮೆಟ್ಟಿಲುಗಳನ್ನು ಹತ್ತುವರೋ ಅವರಿಗೆ ತಾನು ಅನುಗ್ರಹಿಸುವೆನೆಂದು ಸ್ವಾಮಿ ಅಯ್ಯಪ್ಪನೇ ಹೇಳಿದ್ದಾನೆ

ಡಿಸೆಂಬರ ಮೊದಲು 41 ದಿವಸಗಳ ಪೂರ್ವದಲ್ಲಿ ವ್ರತವನ್ನು ಹಿಡಿಯಬೇಕಾಗುತ್ತದೆ ವ್ರತಾವಲಂಬಿ ಲೈಂಗಿಕ ಸಂಪರ್ಕವನ್ನು 41 ದಿನಗಳ ವರೆಗೆ ಹೊಂದಿರಬಾರದು ತಲೆಗೂದಲನ್ನು ಬೋಳಿಸಿಕೊಳ್ಳಬಾರದು ಸ್ತ್ರೀಯರಿಂದ ಸಿದ್ಧವಾದ ಅಡಿಗೆ ಸೇವಿಸಬಾರದು ಪುರುಷರಿಂದ ಮಾಡಿದ ಅಡಿಗೆ ಇಲ್ಲವೇ ತಾನೇ ಸಿದ್ಧಪಡಿಸಿದ ಅಡಿಗೆಯನ್ನು ಸೇವಿಸಬಹುದು

- ಮುಂಜಾನೆ ಸಾಯಂಕಾಲ ತಣ್ಣೀರಿನ ಸ್ನಾನವನ್ನು ಮಾಡಬೇಕು ಧೂಮ್ರಪಾನ ಮಾಡಬಾರದು ಮದ್ಯ ಕುಡಿಯಬಾರದು ಮಾಂಸ ಭಕ್ಷಿಸಬಾರದು ಕರಿಬಣ್ಣದ ಅಂಗಿಯನ್ನು ತೊಡಬೇಕು

41 ದಿನಗಳ ನಂತರ ಶಬರಿಮಲೆಗೆ ಹೊರಡುವ ವ್ರತಾವಲಂಬಿ ಒಂದು ತೆಂಗಿನಕಾಯಿ ಪೂಜಾಸಾಮಗ್ರಿ ಹಾಗೂ ಬುತ್ತಿಗಂಟನ್ನು ಹಾಕಿಕೊಂಡಿರುವ ಚೀಲಗಳನ್ನು ಹೆಗಲಮೇಲಿರಿಸಿಕೊಂಡು ಸಾಗಬೇಕು ಸಾಗುವಾಗ ಸ್ವಾಮಿಯ ನಾಮ ಜಪ ಸಂಕೀರ್ತನೆಯಲ್ಲಿ ಲೀನವಾಗಿರಬೇಕು ಸ್ವಾಮಿ ಅಯ್ಯಪ್ಪನು ಬೇಟೆಯಾಡಿರುವ ಪೇಟತ್ತುಳಲ್ ಎಂಬ ಸ್ಥಾನ ಮಾರ್ಗದಲ್ಲಿ ದೊರಕುವುದು ಸ್ವಾಮಿ ದರ್ಶನಕ್ಕೆ ಬಂದವರು ಬೇಟೆಗಾರನ ವೇಷವನ್ನು ಧರಿಸಿ ಇಲ್ಲಿ ಕುಣಿಯುವರು ಪೇರೂರ ತೋಡಿ ಎಂಬಲ್ಲಿ ವ್ರತಾವಲಂಬಿಗಳು ಭತ್ತವನ್ನು ಚೆಲ್ಲುವರು ಪ್ರಯಾಣ ಬೆಳೆಸಿದರೆ ಮುಂದೆ ಬರುವುದು ಕಾಳಗಟ್ಟಿ ಇಲ್ಲಿ ತೆಂಗಿನಕಾಯಿ ಒಡೆದು ಮುಂದೆ ಪಯಣಿಸಬೇಕಾಗುತ್ತದೆ ಅಲ್ಲಿ ಅಳುದಾ ಎಂಬ ನದಿಯಲ್ಲಿ ಮಿಂದು ಶುಚಿರ್ಭೂತರಾಗಿ ನದಿಯಿಂದ ಚಿಕ್ಕ ಕಲ್ಲನೆತ್ತಿಕೊಂಡು ಮುನ್ನಡೆದು ಕಲ್ಲಿಡುಂಕುಂಡ ಎಂಬ ಜಲಾಶಯದಲ್ಲಿ ಕಲ್ಲನ್ನು ಎಸೆಯಬೇಕು ಅನಂತರ ಸಿಗುವುದು ಇಂಜಿಪ್ಪಾರ್ ಕೋಟೆ ಅಲ್ಲಿ ಮತ್ತೊಂದು ತೆಂಗಿನಕಾಯಿಯನ್ನು ಒಡೆದು ಕರಿಮಲೆಯೆಂಬ ಬೆಟ್ಟವನ್ನು ಹತ್ತಿ ಇಳಿದಾಗ ಪಂಪಾನದಿಯು ದೊರಕುವುದು ಅಲ್ಲಿರುವ ಗಣಪತಿಗೆ ತೆಂಗಿನಕಾಯಿಯ ನೈವೇದ್ಯವನ್ನು ಮಾಡಿ ಶಬರಿಯ ಮಲೆ ಬೆಟ್ಟವನ್ನು ಹತ್ತಿದಾಗ ಹದಿನೆಂಟು ಮೆಟ್ಟಲುಗಳಿರುವ ಅಯ್ಯಪ್ಪಸ್ವಾಮಿ ದೇವಾಲಯ ದೊರಕುವುದು

ಮೊದಲನೇ ವರ್ಷದ ಯಾತ್ರಿಕ ಒಂದನೇ ಮೆಟ್ಟಲಿಗೆ ತೆಂಗಿನಕಾಯಿಯನ್ನು ಒಡೆದು ಮುಂದೆ ಸಾಗಬೇಕು ಎರಡನೇ ವರ್ಷದ ಯಾತ್ರಿಕ ಎರಡನೇ ಮೆಟ್ಟಲಿಗೆ ಕಾಯಿಯನ್ನು ಒಡೆಯಬೇಕು ಐದನೇ ವರ್ಷದ ಯಾತ್ರಿಕ ಐದನೇ ಮೆಟ್ಟಲಿಗೆ ಕಾಯಿಯನ್ನು ಒಡೆದು ಮೆಟ್ಟಲುಗಳನ್ನು ಏರಬೇಕಾಗುತ್ತದೆ ಹೀಗೆ ಹದಿನೆಂಟನೇ ವರ್ಷ ಸತತ ಪ್ರವಾಸ ಮಾಡಿದವನು ಹದಿನೆಂಟನೇ ಮೆಟ್ಟಲಿಗೆ ತೆಂಗಿನಕಾಯಿಯನ್ನು ಒಡೆದು ಮುಂದೆ ಸಾಗಿ ಶ್ರೀ ಸ್ವಾಮಿ ಅಯ್ಯಪ್ಪನ ದರ್ಶನವನ್ನು ಪಡೆದು ಪುನೀತಗೊಳ್ಳುವುದು 

# ದ್ರಾಮಿಡೋಪನಿಷತ್ ಸಂಗ್ರಹ

(ತಿರುವಾಯ್‌ಮೊಳಿಸಾರ)

ಕಂದಾಡೈಕೇಶವನ್

ಯಶ್ಚಕಾರ ಸಕಲಾರ್ಥ ಸಂಪದಾಂ
ವ್ಯಂಜನೀಂ ದ್ರಮಿಡವೇದ--ಸಂಗತಂ |
ತಂ ದ್ವಿತೀಯ ಶಠಕೋಪಮನ್ವಹಂ
ಸ್ತೌಮಿ ಸುಂದರ ವರಾಹ್ವಯಮ್ಮುನಿಮ್ ||

ಸಕಲವಾದ ಅರ್ಥ ಸಂಪತ್ತಿಗೆ ಪ್ರಕಾಶಮಾನವಾದ ದ್ರಮಿಡೋಪನಿಷತ್ ಸಂಗತಿ ಎಂಬುವ ಗ್ರಂಥವನ್ನು ಯಾವ ಅಳಹಿಯ ಮಣವಾಳ ಮುನಿಗಳು ಮಾಡಿದರೋ ಅಂತಹ ದ್ವಿತೀಯ ನಮ್ಮಾಳ್ವಾರರೆಂದೇ ಪ್ರಸಿದ್ಧರಾದ ಅಳಹಿಯ ಮಣವಾಳಮಾಮುನಿಗಳನ್ನು ಪ್ರತಿದಿನ ಸ್ತೋತ್ರಮಾಡುತ್ತೇನೆ

ಆಚಾರ್ಯೋದಿತ ಪದ್ಧತ್ಯಾ ದ್ರಾಮಿಡಾಮ್ನಾಯ ಸಂಗತಿಂ
ಅಭಿದಾಸ್ಯೇ ವಿಶೇಷಜ್ಞೈ ಆದರಾತ್ ಗೃಹ್ಯತಾಮಿಹ ||

ದ್ರಮಿಡೋಪನಿಷತ್ ಸಂಗತಿಯನ್ನು ಪೂರ್ವಾಚಾರ್ಯರು ಅನುಗ್ರಹಿಸಿದ ರೀತಿಯಲ್ಲಿ ಹೇಳುವೆನು ಈ ಲೀಲಾವಿಭೂತಿಯಲ್ಲಿ ವಿಶೇಷಾರ್ಥಗಳನ್ನು ತಿಳಿದವರಿಂದ ಶ್ರದ್ಧೆಯಿಂದ ಅನುಸಂಧಾನ ಮಾಡಲ್ಪಡಲಿ

ಶ್ರೀಮಾನ್ ಗುಣಾಂಬುನಿದಿ ಅವಾಪ್ತ ಸಮಸ್ತ ಕಾಮ
ಶೌರಿ ಶರಾರಿ ಮನು ಜನ್ಮ ಪರಿಭ್ರಮಂತಮ್ |
ಆಕಸ್ಮಿಕೇ ಕ್ಷಣವಶಾತ್ ಅತಿನಿತ್ಯಮುಕ್ತಂ
ಬೃಂದಾ ತೃಣೀ ಕರಣ -- ಶಕ್ತಿ ಧರಶ್ಚಕಾರ ||

ಶ್ರೀ ಲಕ್ಷ್ಮೀ ವಿಶಿಷ್ಟನಾದ ಸಕಲ ಕಲ್ಯಾಣ ಗುಣಗಳಿಗೆ ರತ್ನಾಕರ ಪ್ರಾಯನು, ಅವಾಪ್ತ ಸಮಸ್ತ ಕಾಮನು, ಪಲ್ಲೇರುಕಾಯಿ ಮುಳ್ಳುಗಳನ್ನು ಹಸೀ ಎಳೀ ಗರಿಕೆ ಹುಲ್ಲಿನಂತೆ ಮಾಡುವ ಶಕ್ತಿಯುಳ್ಳವನು, ಶ್ರೀಕೃಷ್ಣ ಪರಮಾತ್ಮನು, ಪ್ರತಿ ಜನ್ಮದಲ್ಲೂ ತಿರುಗುತ್ತಿರುವ ಶ್ರೀ ನಮ್ಮಾಳ್‌ವಾರ್ ಎಂಬುವರನ್ನು (ಶರಾರಿಮ್) ನಿರ್ಹೇತುಕವಾದ ಕಟಾಕ್ಷದಿಂದ ನಿತ್ಯ ಸೂರಿಗಳನ್ನೂ ಕೂಡ ಅತಿಕ್ರಮಿಸಿದ ಮಹಿಮೆಯುಳ್ಳವರಾಗಿ ಮಾಡಿದ

ಆದ್ಯೇ ವಯಸ್ಯಪಿ ಶತೋ ನುಭವನ್ಮುರಾರಿಂ
ಅಸ್ತನ್ಯಪಾನ -- ರಸಿಕಶ್ಶರಜಿನ್ಮುನೀಂದ್ರ |
ಆಸ್ಥಾಯ ಮೌನ ಮವಧೀರ್ಯ -- ಚ -- ಲೋಕವೃತ್ತಂ
ಆಷೋಡಶಾಬ್ದ ಮತಿವಾಹಿತವಾನ್ -- ದಿನಾನಿ ||

ತರುವಾಯ ಶಠವಾಯವನ್ನು ಜಯಿಸಿದ ಮುನಿಶ್ರೇಷ್ಠರಾದ ನಮ್ಮಾಳ್‌ವಾರ್ ಎಂಬುವರು, ಮಗುವಾಗಿದ್ದಾಗಿನಿಂದಲೇ ಸ್ತನ್ಯಪಾನಾದಿಗಳಲ್ಲಿ ಆಶೆಯಿಲ್ಲದವರಾಗಿ ಮುರನೆಂಬ ಅಸುರನನ್ನು ಸಂಹರಿಸಿದ ಸರ್ವೇಶನನ್ನು ಧ್ಯಾನಿಸುತ್ತಿರಲಾಗಿ ಮೌನವನ್ನು ಹೊಂದಿ ಲೌಕಿಕವ್ಯಾಪಾರಗಳನ್ನು ತಿರಸ್ಕರಿಸಿ, ಹದಿನಾರು ವರ್ಷಗಳನ್ನು ಕಳೆದರು



ಯೇ ರಾಘವೇ ಭರತ ಲಕ್ಷ್ಮಣ ಜಾನಕೀನಾಂ
ಯೇ ಘೋಷ ಮುಗ್ಧ -- ಸುದೃಶಾಮಪಿ ನಂದ ಸೂನೌ
ಭಾವಾರಸ್ಯೈಕ -- ವಪುಷ ಪ್ರಥಿತಾಶ್ಶರಾರಿ
ತಾನೇವ ವಾ ತದಧಿಕಾನುತ ತತ್ರ ಲೇಭೇ ||

ಭರತ ಲಕ್ಷ್ಮಣ ಸೀತಾದೇವಿಯರಿಗೆ ಶ್ರೀರಾಮನಲ್ಲಿ ಯಾವ ಭಾವ ಬಂಧನವು ಪ್ರಸಿದ್ಧಿಯಾಗಿತ್ತೋ, ಗೋಪಿಯರಲ್ಲಿ ಶ್ರೀಕೃಷ್ಣನಲ್ಲಿ ಯಾವ ಪ್ರೀತಿಯು ಪ್ರಸಿದ್ಧವಾದದ್ದೋ, ಶೃಂಗಾರಾದ್ಯಷ್ಟರಸಗಳೇ ಶರೀರವನ್ನುಳ್ಳ ಅಂತಹ ಭಾವಗಳನ್ನಾಗಲಿ ಅವುಗಳಿಗಿಂತ ಹೆಚ್ಚಾದ ಭಾವಗಳನ್ನು ಆ ಈಶ್ವರನಲ್ಲಿ ಪರಾಂಕುಶಮುನಿಗಳು (ಶರಾರಿ -- ನಮ್ಮಾಳ್ವಾರ್) ಹೊಂದಿದರು

ಪ್ರಹ್ಲಾದ -- ನಾರದ ಪ್ರಮುಖ ಪ್ರಭವಾ ಚ ಭಕ್ತಿ
ಸ್ನೇಹ ಸ್ತಧಾ ದಶರಥಾರ್ಜುನ ಬಾನ್ಧವೋತ್ಥೈ |
ಸರ್ವೇ, ಚ, ತೇ ಶರಜಿತ್ ಪುರುಷೇ ಪರಸ್ಮಿ
ಆನಂದನೇ ಪದಜುಷಾ ಮತಿಮಾತ್ರ ಮಾಸನ್ ||

# ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಸ್ವಲ್ಪವೇ ಸಂಪದವನ್ನು ನೀಡಿರಿ ದೈವಿಕ ಫಲವನ್ನು ಪಡೆಯಿರಿ"

ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಾದ ತಿರುಮಲೆ ಕಲಿಯುಗ ವೈಕುಂಠವಾಗಿದ್ದು ದಿನವೂ ಸಹಸ್ರಾರು ಮಂದಿ ಯಾತ್ರಿಕರು ಸ್ವಾಮಿ ದರ್ಶನಕ್ಕಾಗಿ ಆಗಮಿಸುತ್ತಾರೆ ದಿನದಿನವೂ ಹೆಚ್ಚುತ್ತಿರುವ ಯಾತ್ರಿಕ ಸಂದಣಿಯ ವಸತಿ ಸೌಲಭ್ಯಗಳ ಏರ್ಪಾಡಿಗಾಗಿ ತಿ ತಿ ದೇ ಗಳು ಸುಸಜ್ಜಿತ ಅತಿಥಿಗೃಹಗಳನ್ನೂ, ಈಗಿರುವ ಕಾಟೇಜುಗಳ ಮೇಲೆ ಮೊದಲ ಅಂತಸ್ತು ಕೊಠಡಿಗಳನ್ನೂ ಸಪ್ತಗಿರಿ ಸತ್ರಗಳ ಕೋಣೆಗಳನ್ನೂ ದಾನಯೋಜನೆಯಲ್ಲಿ ನಿರ್ಮಿಸುತ್ತಿದೆ ತಿರುಮಲೆಯಲ್ಲಿ ವರ್ಷಪೂರ್ತಿ ಸೇರುವ ಯಾತ್ರಿಕ ಸಂದೋಹದ ಸೇವೆಯಲ್ಲಿ ಪಾಲುಗೊಳ್ಳಲು ಭಕ್ತದಾನಿಗಳಿಗೆ ಇದೊಂದು ಸದವಕಾಶ

## ೧ ಮೊದಲ ಅಂತಸ್ತು

ತಿರುಮಲೆಯ ಆಳ್ವಾರ್ ಟ್ಯಾಂಕ್ ಮಂಗಳಭಾವಿ ಶಂಕುಮಿಟ್ಟ ಶೇಷಾದ್ರಿನಗರ, ಅಂಜನಾದ್ರಿನಗರ ಗರುಡಾದ್ರಿನಗರ ಕಾಟೇಜುಗಳಲ್ಲಿ (ಸಿ ಹಾಗೂ ಡಿ ಭಾಗಗಳು) (ನೆಲ ಅಂತಸ್ತಿನಲ್ಲಿರುವ ಎ ಹಾಗೂ ಬಿ ಭಾಗಗಳ ಮೇಲೆ) ೨೦೦ ಮೊದಲ ಅಂತಸ್ತು ಕಾಟೇಜುಗಳನ್ನು ನಿರ್ಮಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದ್ದು ಎ ಟಿ ಸಿ ಎಂ ಬಿ ಸಿ, ಎಸ್ ಎಂ ಸಿ ಎಸ್ ಎನ್ ಸಿ ಗಳಲ್ಲಿ ನೂರು ಕಾಟೇಜುಗಳ ಮೊದಲ ಅಂತಸ್ತು ನಿರ್ಮಾಣ ಪೂರ್ತಿಯಾಗಿ ದಾನಿಗಳಿಗೆ ನೀಡಲಾಗಿದೆ ಎ ಎನ್ ಸಿ ಜಿ ಎನ್ ಸಿ ಗಳಲ್ಲಿನ ನೂರು ಮೊದಲ ಅಂತಸ್ತು ಕಾಟೇಜುಗಳು ನಿರ್ಮಾಣ ಪೂರ್ಣಗೊಳ್ಳುವ ಹಂತದಲ್ಲಿವೆ ಇವು ತಿರುಮಲೆಯ ಟಿ ಬಿ ಶಂಕು ಚಕ್ರ ನಾಮಗಳ ಬಳಿಯಿವೆ ನೆಲ ಅಂತಸ್ತಿನ ಎ ಹಾಗೂ ಬಿ ಕಾಟೇಜುಗಳ ಮೇಲೆ ಸಿ ಹಾಗೂ ಡಿ ಭಾಗಗಳ ಕಾಟೇಜುಗಳು ಪ್ರತಿಯೊಂದೂ ಎರಡು ಕೋಣೆಗಳನ್ನು ಹೊಂದಿ (೯೭೨ ಚದರಡಿ ಹಾಗೂ ೧೦೧೨ ಚದರಡಿ) ಸ್ನಾನ ಶೌಚಗೃಹಗಳನ್ನೊಳಗೊಂಡಿರುತ್ತವೆ

ರೂ ೧೫ ಲಕ್ಷ ರೂಗಳನ್ನು ನೀಡುವುದರಿಂದ ದಾನಿಯು ಒಂದು ಮೊದಲ ಅಂತಸ್ತಿನ ಕಾಟೇಜುಗಳನ್ನು ತಮ್ಮ (ತಮ್ಮ, ಸಂಸ್ಥೆ, ಟ್ರಸ್ಟ್ ಕಂಪನಿ) ಹೆಸರಿನಲ್ಲಿ ದಾನ ಮಾಡಬಹುದು

## ೨ ರಾಮಬಗೀಚ ಅತಿಥಿ ಗೃಹಗಳು

ಪ್ರತಿಯೊಂದು ಅಂತಸ್ತಿನಲ್ಲೂ ೫೦ ಸೂಟ್‌ಗಳಂತೆ ಮೂರು ಅಂತಸ್ತುಗಳಲ್ಲಿ ಒಟ್ಟು ೧೫೦ ಸೂಟ್‌ಗಳಿರುವ ಮೂರು ಅತಿಥಿಗೃಹಗಳನ್ನು ನಿರ್ಮಿಸಲು ಯೋಜಿಸಲಾಗಿದ್ದು ಅತಿಥಿಗೃಹ ೧ರಲ್ಲಿ ೧೦೮ ಸೂಟ್‌ಗಳನ್ನು ನಿರ್ಮಿಸಿ ದಾನಿಗಳಿಗೆ ನೀಡಲಾಗಿದೆ ಅತಿಥಿಗೃಹ ೨ರಲ್ಲಿ ೧೫೦ ಸೂಟ್‌ಗಳನ್ನು ನಿರ್ಮಿಸಿ ೫೮ ಸೂಟ್‌ಗಳನ್ನು ದಾನಿಗಳಿಗೆ ನೀಡಲಾಗಿದೆ ಇಲ್ಲಿನ ಮಿಕ್ಕ ೯೨ ಸೂಟ್‌ಗಳೇ ಅಲ್ಲದೆ ಅತಿಥಿಗೃಹ ೩ರಲ್ಲಿನ ೧೫೦ ಸೂಟ್‌ಗಳು ನಿರ್ಮಾಣದ ಕೊನೆಯ ಹಂತದಲ್ಲಿವೆ

ಈ ಮೂರು ಅತಿಥಿಗೃಹಗಳು ದೇವಾಲಯದ ಎದುರಿಗೆ ಅರ್ಧ ಫರ್ಲಾಂಗ್ ದೂರದಲ್ಲಿ ಬೇಡಿ ಆಂಜನೇಯಸ್ವಾಮಿ ದೇವಾಲಯದ ಹಿಂಭಾಗದಲ್ಲಿ ನೂತನ ಆಸ್ಥಾನ ಮಂಟಪದ ಪಕ್ಕದಲ್ಲಿವೆ ಪ್ರತಿ ಸೂಟ್‌ನ ಪ್ಲಿಂತ್ ಏರಿಯಾ ೪೪೫ ಚದರಮೀಟರ್ ಆಗಿದ್ದು (ಸ್ನಾನ ಶೌಚ ಗೃಹಗಳೊಡನೆ) ಸಾಮಾನ್ಯ ಅಂಗಳವಿದೆ

ರೂ ೬೦ ೦೦೦ ಮೊತ್ತದ ದಾನದಿಂದ ಒಂದು ಸೂಟ್ ಅನ್ನು ದಾನಿಗಳು ತಮ್ಮ ತಮ್ಮ ಹೆಸರಿನಲ್ಲಿ ನೀಡಬಹುದು

## ೩ ಸಪ್ತಗಿರಿ ಸತ್ರಗಳು

ಒಂದು ಕೇಂದ್ರ ವಿಭಾಗದ ಸುತ್ತ ೯ ವಿಭಾಗಗಳಿರುವಂತಹ ಒಂದು ಮಹತ್ ಯೋಜನೆಯನ್ನು ತಿ ತಿ ದೇ ಆರಂಭಿಸಿದೆ ೧ ಹಾಗೂ ೯ ನೇ ವಿಭಾಗಗಳು ಪ್ರವೇಶ ಹಾಗೂ ಉಪಹಾರಗೃಹಗಳಿಗಾಗಿ ಕೇಂದ್ರ ವಿಭಾಗವು ಅಷ್ಟ ಮುಖಗಳ ಅಂಗಳವನ್ನು ಹೊಂದಿದ್ದು ಎಂಟು ಮುಖಗಳಲ್ಲೂ ಒಂದೊಂದು ವಿಭಾಗ ನಿರ್ಮಾಣವಾಗುವುದು ಯಾವುದೇ ವಿಭಾಗಕ್ಕೂ ೧ನೇ ವಿಭಾಗದಿಂದ ಪ್ರವೇಶ ಮಿಕ್ಕ ವಿಭಾಗಗಳು ೨ ರಿಂದ ೮ (ಒಟ್ಟು ೭ ವಿಭಾಗ) ೯೫೪ ಕೋಣೆಗಳನ್ನು ಹೊಂದಿದ್ದು ೧೧ ಕೋಣೆಗಳು ಆಡಳಿತ ನಿರ್ವಹಣೆಗಾಗಿದ್ದು ಮಿಕ್ಕ ೯೪೩ ಕೋಣೆಗಳನ್ನು ಯಾತ್ರಿಕರಿಗೆ ನೀಡಲಾಗುವುದು ಮೊದಲ ಹಂತದಲ್ಲಿ ೨ ಹಾಗೂ ೩ನೇ ವಿಭಾಗಗಳ (೧೦೮+೧೪೯) ೨೫೭ ಕೋಣೆಗಳ ನಿರ್ಮಾಣವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸುವ ಹಂತದಲ್ಲಿದೆ ಪ್ರತಿ ಕೋಣೆಯ ವಿಸ್ತೀರ್ಣ (ಸ್ನಾನ ಶೌಚಗಳೊಂದಿಗೆ)೧೨+೧೪ ರೂ ೪೦,೦೦೦ ಗಳ ದಾನದಿಂದ ದಾನಿಯು ತಮ್ಮ ಹೆಸರಿನಲ್ಲಿ ಕೋಣೆಯನ್ನು ನೀಡಬಹುದು ಈ ವರೆಗೆ ೮೦ ಕೋಣೆಗಳಿಗಾಗಿ ಆಂಶಿಕ ಹಾಗೂ ಪೂರ್ಣ ದಾನಗಳನ್ನು ಸ್ವೀಕರಿಸಲಾಗಿದೆ ಎರಡನೇ ವಿಭಾಗದ ಶೀಘ್ರ ಪೂರ್ಣತೆಯ ಬಳಿಕ ಅದನ್ನು ನೀಡಲಾಗುವುದು

## ೪ ಶೇಷಾದ್ರಿನಗರ ಅತಿಥಿಗೃಹ2

ಎರಡಂತಸ್ತಿನ ಈ ಅತಿಥಿಗೃಹದಲ್ಲಿ ೨೬ ಸೂಟ್‌ಗಳಿದ್ದು (ಪ್ರತಿ ಅಂತಸ್ತಿಗೆ ೧೩ ಸೂಟ್‌ಗಳು) ಯಾತ್ರಿಕರಿಗೆ ಬಾಡಿಗೆಯ ಮೇಲೆ ನೀಡಲಾಗುತ್ತದೆ ಪ್ರತಿ ಸೂಟ್ ೪ ೨m x ೪ ೨m ಇರುತ್ತದೆ

ಇಡೀ ಅತಿಥಿಗೃಹಕ್ಕಾಗಿ ಅಥವಾ ಪ್ರತಿ ಅಂತಸ್ತಿಗಾಗಿ ದಾನಗಳಿಗೆ ಆದ್ಯತೆ ನೀಡಲಾಗುವುದು

೨೫ ಲಕ್ಷ ರೂಗಳ ದಾನದಿಂದ ವ್ಯಕ್ತಿ ವ್ಯಕ್ತಿಗಳು ಸಂಸ್ಥೆ, ಕಂಪನಿ ಟ್ರಸ್ಟ್ ಇಡೀ ಅತಿಥಿಗೃಹದ ದಾನಿಗಳಾಗಲು ಸಾಧ್ಯ

ದಾನಿಗಳಿಗೆ ಸೌಲಭ್ಯಗಳು ದಾನಿಗಳು ತಮ್ಮ ಜೀವನಾವಧಿಯಲ್ಲೂ, ಕಂಪನಿ, ಇತ್ಯಾದಿಗಳು ೧೫ ವರ್ಷಗಳೂ ವರ್ಷಕ್ಕೆ ೬೦ ದಿನ (ಒಮ್ಮೆ ೧೦ ದಿನಗಳಿಗೆ ಮೀರದಂತೆ) ತಮ್ಮ ದಾನದ ಕಾಟೇಜು, ಸೂಟು, ಕೋಣೆಗಳಲ್ಲಿ ನಾಮಮಾತ್ರಸೇವಾ ಶುಲ್ಕದಿಂದ ಇರಬಹುದು ದಾನಿಗಳ ಹೆಸರು ವಿಳಾಸಗಳನ್ನು ಶಿಲಾಫಲಕದಲ್ಲಿ ಕೆತ್ತಿಸಿ ದಾನದ ಕೊಠಡಿ ಸೂಟ್‌ಗಳಲ್ಲಿ ಪ್ರದರ್ಶಿಸಲಾಗುವುದು

ಮಿಕ್ಕವಿವರಗಳಿಗಾಗಿ ಕೂಡಲೇ ಬರೆಯಿರಿ **ಕಾರ್ಯನಿರ್ವಹಣಾಧಿಕಾರಿ**, ತಿ ತಿ ದೇ ತಿರುಪತಿ

*****

ಪ್ರಹ್ಲಾದ ನಾರದಾದಿಗಳಿಗೆ ಹುಟ್ಟಿದಂತ ಭಕ್ತಿಯೂ, ಅದೇ ಪ್ರಕಾರ ದಶರಥ ಅರ್ಜುನ ಬಂದುಗಳು -- ಇವರಿಗೆ ಹುಟ್ಟಿದ ಪ್ರೀತಿಯೂ, ಅಂಥ ಸಮಸ್ತವೂ ತನ್ನ ಪಾದಾರವಿಂದಗಳನ್ನಾಶ್ರಯಿಸಿದವರಿಗೆ ಸಂತೋಷಕರನೂ ಶ್ರೇಷ್ಠನಾದ ಭಗವಂತನಲ್ಲಿ ನಮ್ಮಾಳ್ವಾರರಿಗೆ ಅದಿಕ ವಾಗಿ ಭಕ್ತಿ ಪ್ರೀತಿಗಳು ಉಂಟಾದವು.

ಇತ್ಥಂ ಹರೇರನುಭವಾಮೃತ ವಾರಿರಾಶಿ
ಅಂತರ್ಮುನೇಶ್ವರರಿಪೋ ರಮಿತ ಶ್ಯರೀರೇ
ಸೂಕ್ತ್ಯಾ ಬಹಿ ಪರಿವರ್ಹ ಸುತರಾಂ ಜಗಂತಿ
ಸದ್ಯಸ್ಸಿಷೇಚ ಘನ ಸಂಸರಣಾನಲಾನಿ ||

ಈ ರೀತಿಯಾಗಿ ಒಳಗೆ ಅಡಗದೇ ಹೊರಗೆ ಪಾಶುರಗಳ ಮೂಲಕ ಪ್ರವಾಹವಾಗಿ ಹೊರಟು ಅತ್ಯಂತ ಕಠಿನವಾದ ಸಂಸಾರಾಗ್ನಿಯ ಲೋಕ ವನ್ನು ತಕ್ಷಣವೇ ನೆನೆಸಿತು

ಮಾತಾ ಪಿತೃ ಪ್ರಭೃತಿತೋಪಿ ಚ ವತ್ಸಲಾತ್
ಸರ್ವೋಪಕಾರ -- ಚಪಲಾಚ್ಛರಜಿನ್ಮುನೀಂದ್ರಾತ್ |
ವೇದಶ್ಚತುರ್ವಿಧತಯಾ ವಿದಿತಸ್ಸ ಸಾಕ್ಷಾತ್
ಆವಿರ್ಬಭೂವ ಹಿ ನಿಬಂದ -- ಚತುಷ್ಟಯಾತ್ಮಾ ||

ತಾಯಿ ತಂದೆ ಮೊದಲಾದವರಿಗಿಂತ ಪ್ರೀತಿಯುಳ್ಳದ್ದಾದ್ದರಿಂದ ಸಮಸ್ತ ಜನರ ಉಪಕಾರದಲ್ಲಿ ಆಶೆಯಿಂದ ಶ್ರೀನಮ್ಮಾಳ್ವಾರರಿಂದ ನಾಲ್ಕು ವಿಧವಾಗಿ ಪ್ರಸಿದ್ಧವಾದ ಪ್ರತ್ಯಕ್ಷವಾಗಿ ವೇದವು ತಿರುವಿರುತ್ತ, ತಿರುವಾಶರಿ, ಪೆರಿಯ ತಿರುವಂದಾದಿ, ತಿರುವಾಯ್ ಮೊಳಿ ಎಂಬುವು ದಾಗಿ ನಾಲ್ಕು ದ್ರಾವಿಡ ವೇದಗಳು ಅವತರಿಸಿರುವದಷ್ಟೇ

ಶಬ್ದಸ್ಯ ಸಂಸ್ಕೃತತಯಾ ಯದಿಗೌರವಂ ಸ್ಯಾತ್
ಬೌದ್ಧಾದಿ ಶಾಸ್ತ್ರ ವಚಸಾಂ ಅಪಿ ತತ್ರ ಸಂಗ |
ವಾಚ್ಯೇನ ಚೇತ್ಯಧಿತ ಮುತ್ತಮ ವಾಚ್ಯಮೇಷು
ಭಾಷಾ ನಿಕರ್ಷ ಇಹ ತೇನ ನ ಶಕ್ಯಶಂಕ ||

ಸಂಸ್ಕೃತ ಭಾಷೆಯಾಗುವದರಿಂದ ಸಂಸ್ಕೃತ ಶಬ್ದಕ್ಕೆ ಗೌರವ ಆಗುವ ಪಕ್ಷದಲ್ಲಿ ಬೌದ್ಧ, ಶಂಕರ, ಪಾಶುಪತ, ಯಾದವ ಮೊದಲಾದ ಶಾಸ್ತ್ರಶ ಬ್ದಗಳಿಗೂ ಆ ಗೌರವು ಪ್ರಸಕ್ತಿಯಾಗುವುದು ಅರ್ಥದಿಂದ ಶ್ರೇಷ್ಠತೆಯು ಆಗುವುದಾದರೆ ಆ ದ್ರಾವಿಡ ವೇದದಲ್ಲಿ ಉತ್ತಮವಾದ ಅರ್ಥವು ಹೇಳ ಲ್ಪಟ್ಟಿದೆ ಆ ಕಾರಣದಿಂದ ಈ ವೇದದಲ್ಲಿ ಭಾಷಾ ಪ್ರಯುಕ್ತವಾದ ನಿಕೃಷ್ಟತೆಯು ಸಾದ್ಯವಾದ ಶಂಕೆಯನ್ನು ಹೊಂದಲು ಆಗುವುದಿಲ್ಲ

ಪುಂಸ್ತ್ವಂ ನಿಯಮ್ಯ ಪುರುಷೋತ್ತಮತಾ ವಿಶಿಷ್ಟೇ
ಸ್ತ್ರೀ ಪ್ರಾಯಭಾವಕಥನಾ ಜ್ಜಗತೋ ಖಿಲಸ್ಯ |
ಪುಂಸಾಂ ಚ ರಂಜಕವಪು ರ್ಗುಣವತ್ತಯಾಪಿ
ಶೌರೇಶ್ಶರಾರಿ ಯಮಿನೋ ಜನಿ ಕಾಮಿನೀತ್ವಂ ||

ಪುರುಷೋತ್ತಮತ್ವದಿಂದ ಸಮಸ್ತಲೋಕಕ್ಕೆ ಸ್ತ್ರೀಯರ ಸಮವಾದ ಭಾವವನ್ನು ಹೇಳಿರುವುದರಿಂದ ಭಗವಂತನ ಪುರುಷರಿಗೂ ಪ್ರೀತಿಕ ರವಾದ ಶರೀರ ಸೌಂದರ್ಯವನ್ನುಂಟಾಗಿರುವುದರಿಂದ ಶ್ರೀ ನಮ್ಮಾಳ್ವಾ ರ್‌ರವರಿಗೆ ಸ್ತ್ರೀ ಭಾವವು ಸಂಭವಿಸಿತು

ಯಾ ಪ್ರೀತಿರಸ್ತಿ ವಿಷಯೇಷ್ವವಿವೇಕಭಾಜಾಂ
ಸೈವಾಚ್ಯುತೇ ಭವತಿ ಭಕ್ತಿಪದಾಭಿದೇಯಾ |
ಭಕ್ತಿಸ್ತು ಕಾಮ ಇಹ ತತ್ಕಮನೀಯರೂಪೇ
ತಸ್ಮಾನ್ಮುನೇ ರಜನಿ ಕಾಮುಕವಾಕ್ಯಭಂಗೀ ||

ಅವಿವೇಕವನ್ನು ಹೊಂದಿದವರಿಗೆ ಶಬ್ದಾದಿ ವಿಷಯಗಳಲ್ಲಿ ಯಾವ ಸಂತೋಷವು ಆಗುತ್ತಿರುವುದೋ ಅಂತಹ ಸಂತೋಷವೇ ಭಗವಂತ ನಲ್ಲಿ ಭಕ್ತಿ ಎಂಬುವ ಶಬ್ದಾರ್ಥವಾಗಿ ಆಗುತ್ತಿದೆ ಈ ನಮ್ಮಾಳ್ವಾರರಲ್ಲಿ ಆ ಭಗವಂತನ ಸುಂದರ ವಿಗ್ರಹವಿಷಯದಲ್ಲಿ ಭಕ್ತಿಯಾದರೋ ಕಾಮ ವಾಗಿ ಆಗಿರುವುದು ಆ ಕಾರಣದಿಂದ ಆಳ್ವಾರರಿಗೆ ಕಾಮವಶರಾದವರ ಮಾತುಗಳಂತೆ ಹುಟ್ಟಿದವು.

ಯಶ್ಚೇತಸ್ಯೈವ ವಿಶದಾನುಭವ ಪರಸ್ಮಿನ್
ಸಂಶ್ಲೇಷ ಏಷ ಗುಣರತ್ನಮಹಾಂಬುರಾಶೌ |
ವಿಚ್ಛಿತ್ತಿರಸ್ಯ ವಿರಹಸ್ತಿಹ ಯಾಂಗಸಂಗಾ
ಲಾಭವ್ಯಥಾ ವಿರಚಿತಾ ಮುನಿಪುಂಗವಸ್ಯ ||

ಶ್ರೀ ನಮ್ಮಾಳ್ವಾರರಿಗೆ ಅನಂತ ಕಲ್ಯಾಣ ಗುಣಾಕರನಾದ ಶ್ರಿಯ ಪತಿ ಯಲ್ಲಿ, ಅವನ ವಿಷಯವಾದ ಅನವರತ ಭಾವನಾ ಪ್ರಕರ್ಷದಿಂದ ಮಾನಸ ಸಾಕ್ಷಾತ್ಕಾರವು ಉಂಟಾಯಿತು ಅದೇ ಇವರಿಗೆ ಭಗವತ್ ಸಂಶ್ಲೇಷವೆಂದೂ ಅಂಥ ಮಾನಸ ಸಾಕ್ಷಾತ್ಕಾರದಲ್ಲಿ ಭಗವಂತನ ದಿವ್ಯ ಮಂಗಳ ವಿಗ್ರಹಾನುಭವವನ್ನು ಹೊಂದಿ, ಆತನ ಸಂಗವನ್ನು ಆಶಿಸಿ ಆಲಿಂಗನಕ್ಕೆ ಯತ್ನಿಸಲೂ ಅದು ಲಭಿಸದೇ ಹೋದದ್ದರಿಂದ ಮನೋ ವ್ಯಥೆಯನ್ನು ಹೊಂದಿದರು ಆ ಮನೋ ವ್ಯದೆಯಿಂದ ಮಾನಸಾನುಭ ವವು ನಶಿಸಿ ಸಂಶ್ಲೇಷ ಭಂಗವುಂಟಾಯಿತು ಅಂದಾ ಸಂಶ್ಲೇಷ ಭಂಗವೇ ಇವರಿಗೆ ವಿರಹವೆಂದು ವ್ಯವಹರಿಸಲ್ಪಟ್ಟಿರುತ್ತೆ

ತತ್ರಾರ್ಥಯದ್ಭವಶಮಂ ಪ್ರಥಮೇ ಪ್ರಬಂಧೇ
ಶೌರೇರ್ಗುಣಂ ಶರಜಿದನ್ವಭವ ದ್ವಿತೀಯೇ |
ತೃಷ್ಣಾಮವರ್ಧಯತ ಭೋಕ್ತುಮಿಮಂ ತೃತೀಯೇ
ಯಾವನ್ಮನೋರಥ ಮಲಬ್ಧಫಲಂ ಚತುರ್ಥೇ ||

ಆ ಸಮಯದಲ್ಲಿ ಆಳ್ವಾರರು ಮೊದಲನೆಯದಾದ ತಿರುವಿರುತ್ತ ವೆಂಬ ಪ್ರಬಂಧದಲ್ಲಿ ಸಂಸಾರ ಶಾಂತಿಯನ್ನು ಯಾಚಿಸಿದರು ಎರಡನೆ ಯದಾದ ತಿರುವಾಶರಿಯಲ್ಲಿ ಶ್ರೀಕೃಷ್ಣನ ಸೌಲಭ್ಯಗುಣಗಳನ್ನು ಅನುಭ ವಿಸಿದರು ಮೂರನೆಯದಾದ ಪೆರಿಯ ತಿರುವಂದಾದಿಯಲ್ಲಿ ಈ ಸರ್ವೇ ಶ್ವರನನ್ನು ಅನುಭವಿಸಲು ಆಸೆಯನ್ನು ವೃದ್ಧಿಮಾಡಿದರು ನಾಲ್ಕನೆಯ ಪ್ರಬಂಧವಾದ ತಿರುವಾಯ್ ಮೊಳಿಯಲ್ಲಿ ಮನೋರಥಕ್ಕನುವಾಗಿ ಫಲ ವನ್ನು ಹೊಂದಿದರು

ಕೈಂಕರ್ಯಮಸ್ಯ ನಿಯಮಾವಧಿ ವೈರ್ಯುಪಾಯ
ತತ್ಪ್ರೀಕ್ರಿಯಾ ವಿಷಯ ಬಂಧ ನಿರಾಶಕೆ ಚ

(27 ನೇ ಪುಟ ನೋಡಿ)



# ತಿ ತಿ ದೇವಸ್ಥಾನಗಳು, ತಿರುಪತಿ
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ

ಶ್ರೀನಿವಾಸನ ಹಾಡುಗಳು ಭಾಗ ೨ (ಶ್ರೀವಾದರಾಜರು,
ವ್ಯಾಸರಾಯರು, ವಾದಿರಾಜರು ಕನಕದಾಸರು) ೪ ೫೦
ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ)
ವಿ ಬಾದರಾಯಣ ಮೂರ್ತಿ ೧೨ ೫೦
ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ)
ಬನ್ನಂಜೆ ಗೋವಿಂದಾಚಾರ್ಯ ೭ ೦೦
ಕೇಶವಾದಿ ರೂಪಗಳು (ಕನ್ನಡ ತೆಲುಗು, ಆಂಗ್ಲ,
ಹಿಂದಿ ಚಿತ್ರವಿವರಣೆ) ಸಂ ಕೆ ಅಪ್ಪಣ್ಣಾಚಾರ್ಯ ೩ ೭೫
ಕರ್ನಾಟಕ ಹರಿದಾಸರು (ಕನ್ನಡ ತೆಲುಗು, ಆಂಗ್ಲ,
ಹಿಂದಿ ಚಿತ್ರವಿವರಣೆ) ಸಂ ಕೆ ಅಪ್ಪಣ್ಣಾಚಾರ್ಯ ೨ ೨೫
ಸ್ತೋತ್ರ ಕುಸುಮಮಾಲಾ ಸಂ ವೆಂಕಟಾಚಲ ೩ ೦೦
ಆಚಾರಗಳು ಆಡಂಬರಗಳು ಕೆ ಚಂದ್ರಮೌಳಿ ೦ ೪೦
ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೦ ೫೦
" (ಕನ್ನಡ ಲಿಪಿಯಲ್ಲಿ) ೦ ೧೨

### ಮಕ್ಕಳಿಗಾಗಿ

ಶ್ರೀಪಾದರಾಜರು ಎಂ ಎಸ್ ಗುಂಡೂರಾವ್ ೦ ೭೫
ಮಹಿಪತಿದಾಸರು ಶಾನಭಾಗ ೦ ೮೫
ಪ್ರಸನ್ನ ವೆಂಕಟದಾಸರು ವಿ ಬಾದರಾಯಣಮೂರ್ತಿ ೦ ೮೦
ಗೋಪಾಲದಾಸರು ರುಕ್ಮಿಣಿಗಿರಿಮಾಜಿ ೦ ೭೫

### ಹಿಂದಿ

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ
ಡಾ ಎಂ ಸಂಗಮೇಶಂ ೦ ೨೦
ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) ೧೧ ೦೦
ತೀರ್ಥರಾಜ ತಿರುಪತಿ ಡಾ ಎಂ ಸಂಗಮೇಶಂ ೧ ೫೦

### ಸಂಸ್ಕೃತ

ಶ್ರೀ ವೇಂಕಟೇಶ್ವರ ಸುಪ್ರಭಾತಂ ೦ ೧೩
ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ ೦ ೬೨
ಕಠೋಪನಿಷತ್ ಡಾ ಕೆ ಸಿ ವರದಾಚಾರಿ ಹಾಗೂ
ಡಾ ಡಿ ತಾತಾಚಾರ್ಯ ೧೫ ೦೦
ಮಾರ್ಕಂಡೇಯ ಸಂಹಿತಾ ೧೮ ೦೦
ತತ್ತ್ವಸಂಖ್ಯಾನಂ ಆರ್ ರಾಮಮೂರ್ತಿ ಶರ್ಮಾ ೨ ೦೦
ಬ್ರಹ್ಮಸೂತ್ರ ಭಾಷ್ಯ (ಭಾಗ ೧)
ಆರ್ ರಾಮಮೂರ್ತಿ ಶರ್ಮಾ ೩೦ ೦೦
ಅಲಂಕಾರ ಸಂಗ್ರಹ ಸಂ ಕೆ ಭಾಸ್ಕರರಾವ್ ೧೭ ೦೦
ಸೀತಾರಾಮಾಂಜನೇಯಂ
ಡಾ ಡಿ ಅರ್ಕಸೋಮಯಾಜಿ ೫೦ ೦೦
ಪ್ರಶ್ನೋಪನಿಷತ್ ೧೧ ೦೦
ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರ.
ಸಂ ಡಾ ಎಸ್ ಬಿ ರಘುನಾಥಾಚಾರ್ಯ ೨೫ ೦೦

೧೦೦೦ ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ ೩೦ಶತಾಂಶ ರಿಯಾಯಿತಿಯೂ, ೫೦೦ ರೂಗಳಿಂದ ೧೦೦೦ ರೂ ವರೆಗೆ ೨೫ಶತಾಂಶ, ರಿಯಾಯಿತಿಯೂ ೧೦೦ ರೂ ಗಳಿಂದ ೫೦೦ ರೂ ವರೆಗೆ ೧೫ಶತಾಂಶ ರಿಯಾಯಿತಿಯೂ ಉಂಟು

ಅಂಚೆವೆಚ್ಚ ಪ್ರತ್ಯೇಕ

ಕೂಡಲೇ ಬರೆಯಿರಿ

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ ತಿ ದೇ ತಿರುಪತಿ

# ಶ್ರೀನಿವಾಸ ಸುಪ್ರಭಾತ

ವಾರಿಜಾತ ರಮೇಶ್



ಸಪ್ತಾಶ್ವರಥಮನೇರಿ ರವಿಯು ಎಂದಿಹನು
ಸುಪ್ರಭೆಯು ಪಸರಿಸಿಹುದು ನಾಲ್ದೆಸೆಯಲಿ
ಸಪ್ತಗಿರಿಗೊಡೆಯ ಹೇ ಶ್ರೀನಿವಾಸ
ಸುಪ್ರಭಾತವು ನಿನಗೆ ಶ್ರೀ ವೆಂಕಟೇಶ || ಪ ||

ಗಗನ ಮುಟ್ಟುತಿದೆ ಘಂಟೆಗಳ ನಾದ
ಗಜರಾಜ ರಕ್ಷಕ ಗರುಡವಾಹನ
ಗರುಡಾದ್ರಿನಿವಾಸ ಹೇ ಶ್ರೀನಿವಾಸ
ಸುಪ್ರಭಾತವು ನಿನಗೆ ಶ್ರೀ ವೆಂಕಟೇಶ || ೧ ||

ಶಂಖ ಚಕ್ರ ಶೋಭಿತ ಶ್ಯಾಮಸುಂದರ
ಶತಕೋಟಿರವಿತೇಜ ಶುಭಚರಿತ
ಶೇಷಾದ್ರಿನಿವಾಸ ಹೇ ಶ್ರೀನಿವಾಸ
ಸುಪ್ರಭಾತವು ನಿನಗೆ ಶ್ರೀ ವೆಂಕಟೇಶ || ೨ ||

ವನಜಗಳರಳಿ ಉಷೆಯ ಸ್ವಾಗತಿಸಿಹುದು
ವಾರಿಜನಾಭ ವರದಾಭಯ ಹಸ್ತ
ವೃಷಭಾದ್ರಿನಿವಾಸ ಹೇ ಶ್ರೀನಿವಾಸ
ಸುಪ್ರಭಾತವು ನಿನಗೆ ಶ್ರೀ ವೆಂಕಟೇಶ || ೩ ||

ಸಹಸ್ರಕುಂಭದಿಂ ತಂದಿಹರು ಗಂಗಾಜಲ
ಸ್ವರ್ಣಾಭಿಷೇಕಕೆ ಕಾದಿಹರು ಭಕ್ತಜನ
ಸಿಂಹಾದ್ರಿನಿವಾಸ ಹೇ ಶ್ರೀನಿವಾಸ
ಸುಪ್ರಭಾತವು ನಿನಗೆ ಶ್ರೀವೆಂಕಟೇಶ || ೪ ||

ನಾನಾ ರೂಪದಿ ಮೆರೆಯುವ ಜಗದಾನಂದ
ನವವಿಧ ಸೇವೆಗೆ ನಿರೀಕ್ಷಿಸಿಹರು ಜನವೃಂದ
ನಾರಾಯಣಾದ್ರಿನಿವಾಸ ಹೇ ಶ್ರೀನಿವಾಸ
ಸುಪ್ರಭಾತವು ನಿನಗೆ ಶ್ರೀವೆಂಕಟೇಶ || ೫ ||

ಅಂಜನಾಸುತ ವಂದಿತ ತಿರುಮಲೇಶ
ಅಂಗನಾಮಣಿಯರು ಆರತಿಯ ತಂದಿಹರು
ಅಂಜನಾದ್ರಿನಿವಾಸ ಹೇ ಶ್ರೀನಿವಾಸ
ಸುಪ್ರಭಾತವು ನಿನಗೆ ಶ್ರೀವೆಂಕಟೇಶ || ೬ ||

ವರಾಹಸ್ವಾಮಿಯ ಮೊದಲ ದರ್ಶನ ಆನಂತರಂ
ವೆಂಕಟ ದರ್ಶನ ಎಂಬೀ ವರವನಿತ್ತ
ವರಹಾದ್ರಿನಿವಾಸ ಹೇ ಶ್ರೀನಿವಾಸ
ಸುಪ್ರಭಾತವು ನಿನಗೆ ಶ್ರೀವೆಂಕಟೇಶ || ೭ ||

****


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು.
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು.
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

# ಶಂಖ

ಪ್ರಾಚೀನ ಕಾಲದಿಂದಲೂ ಹಿಂದೂಗಳಿಗೆ ಅತ್ಯಂತ ಪೂಜನೀಯ ವಸ್ತು ಶಂಖ ಮಹಾತ್ಮರು ರಾಜರು ದೇವದೇವತೆಗಳ ಜನನವನ್ನು ಹಿಂದೆ ಶಂಖನಾದದ ಮೂಲಕವೇ ಘೋಷಿಸುತ್ತಿದ್ದರು ಮಹರ್ಷಿಗಳು ಹಾಗೂ ಚಕ್ರವರ್ತಿಗಳ ಆಗಮವನ್ನು ಸೂಚಿಸಲೂ ಶಂಖವನ್ನು ಬಳಸಲಾಗುತ್ತಿತ್ತು ಭಾರತದ ಕೆಲವು ಭಾಗಗಳಲ್ಲಿ ಕೆಲವು ಪಂಗಡದವರು ಶವದ ಅಂತಿಮಯಾತ್ರೆಯ ಸಮಯದಲ್ಲೂ ಶಂಖನಾದ ಮಾಡುವ ಪದ್ಧತಿಯುಂಟು

ತಂತಿವಾದ್ಯ ಶಂಖ ನಾಗಸ್ವರ ಕೊಂಬು ಹಾಗೂ ತಾಳ ಇವುಗಳಿಂದ ಹೊರಡುವ ಶಬ್ದಗಳನ್ನು ಪಂಚಮಹಾಶಬ್ದಗಳೆನ್ನುತ್ತಾರೆ ಮೂರರಿಂದ ಆರನೇ ಶತಮಾನದ ವರೆವಿಗೂ ಕೆಲವು ಚಕ್ರವರ್ತಿಗಳು ಪಂಚಮಹಾಶಬ್ದ ಎಂಬ ಬಿರುದುಗಳನ್ನು ಗಳಿಸುತ್ತಿದ್ದರು ಕೆಲವು ರಾಜರು ತಮ್ಮ ಕೈಕೆಳಗಿನ ಮಹಾವೀರರೂ ಅನುಯಾಯಿಗಳೂ ಆದವರಿಗೆ ಈ ಹೆಸರಿನ ಬಿರುದುಗಳನ್ನು ಕೊಡುತ್ತಿದ್ದರೆಂದು ಪ್ರಾಚೀನ ಬರಹಗಳಿಂದ ತಿಳಿದುಬರುತ್ತದೆ ಹಿಂದೂ ಪುರಾಣಗಳ ಪ್ರಾಕಾರ ಹದಿನೆಂಟುವಾದ್ಯಗಳಲ್ಲಿ ಶಂಖವಾದ್ಯವೂ ಒಂದು ಆದ್ದರಿಂದಲೇ ಇದನ್ನು ಊದುವುದಲ್ಲದೆ ಮನೆ ಹಾಗೂ ದೇವಸ್ಥಾನಗಳಲ್ಲಿ ದೇವರ ಅಭಿಷೇಕಕ್ಕೆ ಇದರ ಮೂಲಕವೇ ನೀರನ್ನು ಸುರಿಯಲಾಗುತ್ತದೆ

ಶಂಖಂ ಚಂದ್ರಾರ್ಕ ದೈವತ್ಯಂ
ಮಧ್ಯೇ ವರುಣದೈವತ
ಪೃಷ್ಠೇ ಪ್ರಜಾಪತೆ ನತ್ರಂ
ಏತತ್ ಶಂಖಂ ಪ್ರಪೂಜಯೇತ್ ||

ಎಂಬ ಶಂಖವನ್ನು ಪೂಜಿಸುವ ಶ್ಲೋಕ ಪೂಜೆಯಲ್ಲಿ ಶಂಖದ ಮಹತ್ವವನ್ನು ಸಾರುತ್ತದೆ

ಶಂಖಗಳಲ್ಲಿ ವಾಲಂಪುರಿ ಇಡಾಂಪುರಿ ಚಾಲಂಕಾಲಮ್ ಹಾಗೂ ಪಾಂಚಜನ್ಯಂ ಎಂಬುದಾಗಿ ನಾಲ್ಕು ವಿಧಗಳಿವೆ ತಮಿಳುನಾಡಿನ ಕೆಲವು ದೇವಸ್ಥಾನಗಳಲ್ಲಿ ಒಂದು ಸಾವಿರದೆಂಟು ಶಂಖಗಳಿದ್ದು ವಿಶೇಶ ಸಂಧರ್ಭಗಳಲ್ಲಿ ಈ ಎಲ್ಲ ಶಂಖಗಳಲ್ಲೂ ಪವಿತ್ರಗಂಗೆಯನ್ನಿಟ್ಟು ಮಹಾಶಂಖಾಭಿಷೇಕವನ್ನು ಮಾಡುತ್ತಾರೆ

ರಾಮಾಯಣ ಮಹಾಭಾರತಗಳಲ್ಲೂ ಶಂಖದ ಪಾತ್ರ ಬಹಳ ಮುಖ್ಯವಾದುದು ಆಗಿನ ಕಾಲದಲ್ಲಿ ಪ್ರತಿಯೊಬ್ಬ ಪ್ರಮುಖನ ಬಳಿಯೂ ಒಂದೊಂದು ಶಂಖವಿದ್ದು ಅದಕ್ಕೆ ಪ್ರತ್ಯೇಕ ಹೆಸರಿರುತ್ತಿತ್ತು ಶ್ರೀಕೃಷ್ಣನ ಶಂಖದ ಹೆಸರು ಪಾಂಚಜನ್ಯ ಅರ್ಜುನನದು ದೇವದತ್ತ ಭೀಮನದು ಪೌಂಢ್ರ ಯುಧಿಷ್ಠಿರನದು ಅನಂತವಿಜಯ ನಕುಲನದು ಸುಘೋಶ ಸಹದೇವನದು ಮಣಿಪುಷ್ಪಕ – ಹೀಗೆ

ಮಹಾವಿಷ್ಣುವಿನ ಎಡಹಸ್ತದಲ್ಲಿ ಸದಾ ಶಂಖ ಶೋಭಿಸುತ್ತಿರುತ್ತದೆ ಶ್ರೀ ವಿಷ್ಣುವನ್ನು ಶಂಖ ಚಕ್ರ ಗದಾ ಹಸ್ತ ಎಂದೇ ಶ್ಲೋಕಗಳು ವರ್ಣಿಸುತ್ತವೆ ಕುಬೇರನ ಬಳಿಯಿದ್ದ ನವನಿಧಿಗಳಲ್ಲಿ ಅಕ್ಷಯವಾಗುತ್ತಿದ್ದ ನಿಧಿಯನ್ನು ಶಂಖನಿಧಿ ಎಂದೆನ್ನುತ್ತಾರೆ

ಶಂಖಕ್ಕೆ ಸಂಸ್ಕೃತದಲ್ಲಿ ಜಲಜ ಎಂದರೆ ನೀರಿನಲ್ಲಿ ಹುಟ್ಟಿದುದು ಎಂಬ ಹೆಸರಿದೆ ಶಂಖದಿಂದ ಹೊರಡುವ ನಾದವೂ ಅತ್ಯಂತ ಪವಿತ್ರವೆಂಬುದಕ್ಕೂ ಆಧಾರವಿದೆ ಕ್ಷೀರ ಸಾಗರದಲ್ಲಿ ವಿಷ್ಣು ಆದಿಶೇಷನ ಮೇಲೆ ಪವಡಿಸಿರುವಾಗ ವಿಷ್ಣುವಿನ ಹೃದಯದಿಂದ ಹೊರಬಂದು ನರ್ತಿಸುತ್ತಾನೆ ಶಿವ ಸಮುದ್ರದ ಅಲೆಗಳ ಕಲರವ ಆದಿಶೇಷನ ಹಿಸ್ಸೆಂಬ ಶಬ್ದ ಹಾಗೂ ಶಿವನ ಲಯಬದ್ಧ ನಾಟ್ಯ ಇವೆಲ್ಲ ಸಮ್ಮಿಳಿತವಾಗಿ ಶಂಖವನ್ನು ಸೇಂದುವಂತೆ ಈ ಶಬ್ದವನ್ನು ಅಜಪ ಎನ್ನುತ್ತಾರೆ ಶಿವನ ನಾಟ್ಯವನ್ನು ಅಜಪ ನಾಟ್ಯ ಎನ್ನುತ್ತಾರೆ

ಕೆಲವು ಪ್ರಮುಖ ದೇವಾಲಯಗಳಲ್ಲಿ ಅವರದ್ದೇ ಪ್ರತ್ಯೇಕವಾದ ವಾದ್ಯ ವೃಂದವಿದ್ದು ಅವರಲ್ಲಿ ಶಂಖವಾದ್ಯಕ್ಕೆ ಪ್ರಮುಖ ಸ್ಥಾನವಿರುತ್ತದೆ ಅಂತಹ ಶಂಖಗಳನ್ನು ವಿಶೇಷರೀತಿಯಲ್ಲಿ ಅಲಂಕರಿಸುತ್ತಾರೆ ಊದುವಭಾಗಕ್ಕೆ ಸಾಮಾನ್ಯವಾಗಿ ಬೆಳ್ಳಿಯ ತಗಡಿನ ನವಿಲುಗರಿಯ ರೂಪದ ಕೆತ್ತನೆಕೆಲಸವಿರುತ್ತದೆ ಶಂಖವನ್ನು ಎರಡು ಕಡೆಯಿಂದ ಊದಬಹುದು ಪಕ್ಕದಿಂದ ಹಾಗೂ ತುದಿಯ ಭಾಗದಿಂದ ತುದಿಯಿಂದ ಊದಬೇಕಾದರೆ ಅದಕ್ಕೆ ಉದ್ದವಾದ ಕೊಳವೆಯನ್ನು ಸೇರಿಸುವುದುಂಟು ಕೊಳವೆಯುಳ್ಳ ಶಂಖಗಳು ಬಾರೂತನ ಶಿಲ್ಪದಲ್ಲು ಕೊಳವೆಯಿಲ್ಲದ ಶಂಖವಾದ್ಯಗಳು ಅಮರಾವತಿ ಮಧುರಾ ಅಜಂತಾಗಳಲ್ಲೂ ಕಂಡುಬರುತ್ತವೆ ಇದು ಬಹಳ ಪುರಾತನ ವಾದ್ಯವೇ ಆದರೂ ಕಲಿಯುವುದು ಬಹಳ ಕಷ್ಟ ಹಾಗೂ ಕಲಿಯಲು ಬಹಳ ಬಲವಿರಬೇಕೆಂಬ ಕಾರಣದಿಂದಲೋ ಏನೊ ಇದು ಜನಪ್ರಿಯವಾಗಿಲ್ಲ

ಇನ್ನು ವೈಜ್ಞಾನಿಕ ದೃಷ್ಟಿಯಿಂದ ನೋಡಿದರೆ ಶಂಖ ವಿಜ್ಞಾನಿಗಳ ಗಮನವನ್ನು ಬಹಳವಾಗಿ ಸೆಳೆದಿದೆ ಶಂಖವನ್ನು ಊದುವಾಗ ಅದರೊಳಗೆ ಪ್ರವೇಶಿಸುವ ಉಸಿರು ಶಂಖದೊಳಗಿನ ವಕ್ರದಾರಿಯನ್ನು ದಾಟಿ ಹೊರಬರುವಾಗ ತೀವ್ರವೇಗವುಳ್ಳದ್ದೂ ಹೆಚ್ಚು ಉಷ್ಣತೆಯುಳ್ಳದ್ದೂ ಆಗುವುದೆಂದು ಪ್ರಯೋಗಗಳಿಂದ ಸಿದ್ಧವಾಗಿದೆ ಹೀಗೆ ಶಂಖದಿಂದ ಹೊರಬರುವ ಗಾಳಿಯ ಉಷ್ಣಾಂಶವು ನೂರಕ್ಕೆ ಎಂಟರಷ್ಟಿದ್ದರೆ ಅದರ ಪ್ರಭಾವದಿಂದ ಹೊರಗಿನ ಗಾಳಿಯು ಒಂದು ಸೆಕೆಂಡಿಗೆ 8708 ಅಡಿ ವೇಗದಿಂದ ಚಲಿಸುವುದೆಂದು ಪ್ರಯೋಗ ಫಲಿತಾಂಶಗಳು ತಿಳಿಸುತ್ತವೆ ತತ್ಪರಿಣಾಮವಾಗಿ ವಾತಾವರಣದಲ್ಲಿನ ರೋಗಜನಕ ಕೀಟಾಣುಗಳು ನಾಶವಾಗುವುದಲ್ಲದೆ ವಾತಾವರಣದಲ್ಲಿನ ತೇಜಸ್ಸತ್ವದ ಪ್ರಮಾಣವೂ ಹೆಚ್ಚುವುದು ಇಂತಹ ವಾತಾವರಣದಲ್ಲಿನ ವಾಯುವನ್ನು ಉಸಿರಾಡುವುದರಿಂದ ದೇಹದಲ್ಲಿ ರೋಗನಿರೋಧಕ ಶಕ್ತಿಯೂ ಬೆಳೆ








# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | |
| 1 ನೇ ಗಂಟೆ | ಬೆಳಗ್ಗೆ 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12–00 ಗಂಟೆಗೆ |
| 3 ನೇ ಗಂಟೆ | ಸಂಜೆ 6–00 ಗಂಟೆಗೆ |
| ಸರ್ವದರ್ಶನ | ಸಂಜೆ 6–30 ಗಂಟೆಗೆ |
| ಶುದ್ಧಿ | ರಾತ್ರಿ 8–45 ಗಂಟೆಗೆ |
| ಏಕಾಂತ | ರಾತ್ರಿ 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/ ) | |
| ಎರಡನೇ ಗಂಟೆ | ಬೆಳಗ್ಗೆ 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7–00 ಗಂಟೆಗೆ |
| (ಮುಖರ ಮಂಟಪದಲ್ಲಿ, ಶುಲ್ಕ ರೂ 150/–) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು.) | |
| 3 ನೇ ಗಂಟೆ | ರಾತ್ರಿ 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ 8–30 ಗಂಟೆಗೆ |
| ಶುದ್ಧಿ | ರಾತ್ರಿ 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9–45 ಗಂಟೆಗೆ |

**ಪೇಷ್ಕಾರ್.**

ಯುವುದು ಎಂದು ವಿಜ್ಞಾನಿಗಳು ಕಂಡುಹಿಡಿದಿದ್ದಾರೆ ಧನ್ವಂತರೀ ನಿಘಂಟಿನಲ್ಲಿ ಶಂಖದ ಗುಣವರ್ಣನೆ ಹೀಗಿದೆ

ಶಂಖ ಸ್ವಾದು ಕಟು ಪಾಕೀ
ಪಿಯೋಷ್ಣ ಪ್ರಕೀರ್ತಿತ
ಪರಿಣಾಮ ಜಯೇತ್ ಶೂಲಂ
ಚಕ್ಷುಷಂ ರಕ್ತಪಿತ್ತಜಿತ ||

ಶಂಖವು ರುಚಿಗೆ ಕಾರವೆನಿಸಿದರೂ ಜೀರ್ಣವಾದ ಮೇಲೆ ಮಧುರವಾಗಿರುವುದು ಅದು ಸಮುದ್ರದಲ್ಲಿ ಹುಟ್ಟಿದರೂ ಜೀರ್ಣಾಗ್ನಿಯನ್ನು ಪ್ರಜ್ವಲಿಸುವುದರಿಂದ ವಿಷ್ಣುವೀರ್ಯವೆಂದು ಹೇಳುತ್ತಾರೆ ಅದು ಹೊಟ್ಟೆ ನೋವು ಕಣ್ಣಿನ ರೋಗ ಹಾಗೂ ರಕ್ತಸ್ರಾವದ ಬೇನೆಯನ್ನು ಗುಣಪಡಿಸುತ್ತದೆ

ಶಂಖವನ್ನು ನೀರು ಜೇನುತುಪ್ಪ ನಿಂಬೆರಸದಲ್ಲಿ ತೇಯ್ದು ತಿಂದರೆ ಆಮ್ಲಪಿತ್ತ ತಲೆತಿರುಗುವಿಕೆ ಮೊದಲೆ ಕುರು ಮುಂತಾದ ದೋಷಗಳ ನಿವಾರಣೆಯಾಗುವುದೆಂದು ಆಯುರ್ವೇದ ಶಾಸ್ತ್ರ ಹೇಳುತ್ತದೆ

ಬೇಗ ಮಾತುಬಾರದ ಮಕ್ಕಳಿಗೆ ಶಂಖದಲ್ಲಿಟ್ಟ ನೀರನ್ನು ಕುಡಿಸುವುದುಂಟು ಸ್ವರಮಂತ್ರ ದೋಷದಿಂದುಂಟಾದ ಮೂಕತನಕ್ಕೆ ರೋಗಿಯು ದಿನಾಲು ಕೆಲವು ಸಮಯದವರೆವಿಗೆ ಶಂಖವನ್ನು ಊದಬೇಕು ಇದರಿಂದ ಕಿವಿಡುತನವನ್ನು ಸಹ ನಿವಾರಿಸಬಹುದು ಉತ್ತರ ಪ್ರದೇಶದ ಕೆಲವೆಡೆಗಳಲ್ಲಿ ಮಾತು ಸರಿಯಾಗಿ ಬಾರದ ಮಕ್ಕಳಿಗೆ ಚಿಕ್ಕ ಶಂಖದ ಮಾಲೆಯನ್ನು ತೊಡಿಸುತ್ತಾರೆ

ಹೀಗೆ, ಶಂಖ ಪುರಾಣಗಳ ಕಾಲದಾದ ಇಂದಿನ ಕಾಲದವರೆವಿಗೂ ಪ್ರಸಿದ್ಧವೂ ಉಪಯುಕ್ತವೂ ಪೂಜನೀಯವೂ ಆಗಿರುವ ಕೆಲವೇ ವಸ್ತುಗಳಲ್ಲೊಂದಾಗಿದೆ

**ಸುರೇಶ್‌ಮೂನ**



# ನೆನೆ ಗೋವಿಂದನ

—ಜಿ ಎಸ್ ಗುಂಡಪ್ಪ

(ಶ್ರೀ ಶಂಕರಾಚಾರ್ಯ ವಿರಚಿತ ಭಜಗೋವಿದಮ್ ಸ್ತೋತ್ರದ ಕನ್ನಡ ಭಾವಾನುವಾದ)

ನೆನೆ ಗೋವಿಂದನ ನೆನೆ ಗೋವಿಂದನ
ಗೋವಿಂದನ ನೆನೆ ಮೂಢ ಮನ
ಕಾಲವು ಮಾಡೆ ಪ್ರಾಣದ ಹರಣ
ರಕ್ಷಿಸಲಾರದು ವ್ಯಾಕರಣ || ೧ ||

ಧನ ದಾಹವ ನೀ ಬಿಡುಬಿಡು ಮೂಢ
ಹರಿಯನು ನಿರುತವು ಭಜಿಸುತ್ತ
ಇರುವುದರಿಂದಲೆ ತೃಪ್ತಿಯ ಪಡು ನೀ
ಬ್ರಹ್ಮಾನಂದವ ಸವಿಯುತ್ತ || ೨ ||



ನಾರಿಯದೇಹದ ಅಂದಕೆ ನೀನು
ಮೋಹಿತ ನಾಗದೆ ದೂರವಿರು
ಅದು ಬರಿ ಮಾಂಸದ ಮುದ್ದೆ ಎಂಬುದ
ಮತ್ತೆ ಮತ್ತೆ ನೆನೆಯುತಿರು || ೩ ||

ತಾವರೆ ಪತ್ರದ ಮೇಲಿನ ನೀರಿನ
ಪರಿಯೊಳು ಜೀವನ ನಶ್ವರವು
ಲೋಕದೊಳೆಲ್ಲೆಡೆ ವ್ಯಾಪಿಸಿಕೊಂಡಿವೆ
ರೋಗ ರುಜಿನಮದ ವ್ಯಾಕುಲವು || ೪ ||

ಧನಬಲ ಭುಜಬಲ ನಿನಗಿರುವನಕ
ಇರುವರು ಎಲ್ಲರು ನಿನ್ನ ಬಳಿ
ಮುಪ್ಪಾವರಿಸಿ ದುರ್ಬಲನಾಗೆ
ತೊರೆವರು ಎಂಬುದ ನೀನು ತಿಳಿ || ೫ ||

ನಿನ್ನಯ ದೇಹದಿ ಉಸಿರಿರುವನಕ
ಕೇಳುವರೆಲ್ಲರು ನಿನ್ನ ಬಗೆ
ನಿನ್ನಯ ದೇಹವು ಶವವಾದಂದು
ಎಳಿಯಿರೆ ಭಯವು ಹೆಂಡತಿಗೆ || ೬ ||

ಬಾಲ್ಯಾವಸ್ಥೆಯೊಳಾಡುವ ಗೀಳು
ಯೌವನದಲ್ಲಿ ಕಾಮದ ಬಾಳು
ವೃದ್ಧಾಪ್ಯದಲಿ ಚಿಂತೆಯ ಗೋಳು
ಈ ಪರಿ ಜೀವನವೆಲ್ಲವು ಹಾಳು || ೭ ||

ಹೆಂಡತಿ ಯಾರೋ ಮಕ್ಕಳು ಯಾರೋ
ಅತಿವೈಚಿತ್ರ್ಯದ ಸಂಸಾರಾ
ನೀನಾರೆಂಬುವ ತಿಳಿಯಲು ನೀನು
ಸೋದರ ಶ್ರದ್ಧೆಯ ನೀ ತೋರಾ || ೮ ||

ಸತ್ಸಂಗದಲೆ ನಿಸ್ಸಂಗತ್ವವು
ನಿಸ್ಸಂಗತ್ವದಿ ನಿರ್ಮೋಹ
ನಿರ್ಮೋಹತ್ವದಿ ನಿಶ್ಚಲ ತತ್ವ
ಮುಕ್ತಿಗೆ ಇಲ್ಲವು ಸಂದೇಹ || ೯ ||

ಮುಪ್ಪಾವರಿಸಿರೆ ಕಾಮವು ಎಲ್ಲಿ?
ನೀರದು ಹಿಂಗಿರೆ ಕೆರೆಯದು ಎಲ್ಲಿ?
ಹಣ ಮುಗಿದಂದು ಪರಿಜನರೆಲ್ಲಿ?
ಜ್ಞಾನಿಗೆ ಲೋಕದ ಮೋಹವು ಎಲ್ಲಿ? || ೧೦ ||

ಧನಜನಯೌವನ ಮದಗಳ ಬಿಡುನೀ
ಶಾಶ್ವತ ವಿಲ್ಲವು ಅವುಗಳಿಗೆ
ಮಾಯಾಮಯವೀ ಜಗವೆಂದರಿತು
ಮುನ್ನಡೆ ಆತ್ಮದ ದರ್ಶನಕೆ || ೧೧ ||

ಹಗಲೂ ಇರುಳೂ ಸಂಜೆಯ ಬೆಳಗೂ
ಶಿಶಿರ ವಸಂತದ ಪುನರಾಗಮನ
ಕಾಲದ ಆಟದಿ ಮುಗಿವುದು ಬಾಳು
ಜೀವವು ಬಿಡದು ಆಸೆಯನ || ೧೨ ||

ಸತಿ ಸಂಪತ್ತಿನ ಚಿಂತೆಯ ಬಿಡು ನೀ
ವಿಧಿಯೊಂದಿಹುದದ ಮರೆಯದಿರು
ಸಜ್ಜನ ಸಂಗವೆ ಮೂಲೋಕದಲಿ
ಮುಕ್ತಿಯ ನೀಡುವ ಕಲ್ಪತರು || ೧೩ ||

ಬೋಳಿಸಿ ತಲೆಯ ಬೆಳೆಯಿಸಿ ಜಟೆಯ
ಕಾವಿಯ ಉಡುಗೆಯ ವಿಧವಿಧ ವೇಷ
ಕಂಡರು ಕಾಣದ ತೆರದಿಂದಿರುವ
ಹೊಟ್ಟೆಯ ಪಾಡಿನ ಎರಿ ಆವೇಶ || ೧೪ ||
ದುರ್ಬಲವಾದವು ಅಂಗಗಳೆಲ್ಲ
ಬಾಯಿಯ ಒಳಗಡೆ ಹಲ್ಲುಗಳಿಲ್ಲ
ಕೋಲನು ಹಿಡಿಯದೆ ನಡೆಯುವುದಿಲ್ಲ
ಆದರು ಆಸೆಯ ಬಿಡಲೇ ಇಲ್ಲ || ೧೫ ||

ಮುಂಗಡೆ ಬೆಂಕಿ ಹಿಂಗಡೆ ಬಿಸಿಲು
ಮಂಡಿಯ ಮಡಚಿ ಕಳೆವುದು ಇರುಳು
ಭಿಕ್ಷೆಯ ಅನ್ನ ಮರದಡಿ ವಾಸ
ಆಗಲೆ ಇಲ್ಲವು ಆಸೆಯನಾಶ || ೧೬ ||

ಕಾಶೀ ಗಂಗಾ ತಾಣಗಳಲ್ಲಿ
ಇದ್ದರು ವ್ರತ ಜಪ ದಾನಗಳಲ್ಲಿ
ಗಳಿಸದೆ ಇದ್ದರೆ ಜ್ಞಾನವನು
ಪಡೆಯನು ಆತನು ಮುಕ್ತಿಯನು || ೧೭ ||

ದೇಗುಲ ಮರಗಳ ಆಶ್ರಯದಲ್ಲಿ
ಜಿಂಕೆಯ ಚರ್ಮವ ಧರಿಸುತ ಮಲಗಿ
ಹೊಂದಿರೆ ಅತಿ ವೈರಾಗ್ಯವನು
ಖಂಡಿತ ಪಡೆವನು ಮುಕ್ತಿಯನು || ೧೮ ||

ಯೋಗದಲಿದ್ದೋ ಭೋಗದಲಿದ್ದೋ
ಸಂಗದಲಿದ್ದೋ ಒಬ್ಬನೆ ಇದ್ದೋ
ಬ್ರಹ್ಮಾನಂದವ ಬಯಸುವ ಪುರುಷ
ಪಡೆವನು ಖಂಡಿತ ಸೌಖ್ಯದ ಹರುಷ || ೧೯ ||

ಭಗವದ್ಗೀತೆಯ ಪಠಿಸುತ ಸ್ವಲ್ಪ
ಗಂಗಾಜಲವನು ಕುಡಿಯುತ ಅಲ್ಪ
ಮುರಾರಿಯರ್ಚನೆ ಮಾಡಿದೊಡೆ
ಭಯವಿನ್ನೇತಕೆ ಯಮನ ಕಡೆ || ೨೦ ||

ಜನನವು ಪುನ ಮರಣವು ಪುನ
ತಾಯಿಯ ಉದರದಿ ಶಯನವು ಪುನ
ದುಃಖದಿ ಕೂಡಿದೆ ಈ ಸಂಸಾರ
ಮುರಾರಿ ಇದರಿಂ ಬಿಡುಗಡೆ ತಾರ || ೨೧ ||

ಬೀದಿಯಲಿರುವ ಚಿಂದಿಯನುಟ್ಟು
ಪುಣ್ಯಾಪುಣ್ಯದ ಮೇರೆಯ ಬಿಟ್ಟು



ಶಿಶುವೋಲ್ ಮರುಳನ ಭಾವವತೊಟ್ಟು
ಇರುವುದೆ ಯೋಗಿಯ ಬಾಳಿನ ಗುಟ್ಟು || ೨೨

ನೀನಾರ್ ನಾನಾರ್ ಎಲ್ಲಿಂದ ಬಂದುದು
ಜನನೀ ಜನಕರು ಯಾರೆನಗೆ?
ಎನ್ನುವ ಸಂಗತಿ ಚಿಂತಿಸಿ ಅರಿಯೆ
ತಿಳಿಯುವೆ ಲೋಕದ ಅಸ್ಥಿರಮಾಯೆ || ೨೩ ||

ನಿನ್ನಲಿ ಎನ್ನಲಿ ಎಲ್ಲೆಡೆ ಹರಿಯು
ಸಿಟ್ಟದು ಏತಕೆ ನನ್ನೊಡನೆ
ಎಲ್ಲದರಲ್ಲಿಯು ಸಮತೆಯಭಾವ
ಹೊಂದಿರು ಬಯಸಿರೆ ವಿಷ್ಣುವನೆ || ೨೪ ||

ಸಖ ಸುತ ಬಂಧು ವೈರಿಗಳೊಂದಿಗೆ
ಕಲಹವ ಸ್ನೇಹವ ನೀ ಮಾಣು
ಭೇದದ ಭಾವವ ಮನದಿಂ ಬಿಟ್ಟು
ಎಲ್ಲೆಡೆ ಬ್ರಹ್ಮನ ನೀಕಾಣು || ೨೫ ||

ಕಾಮಕ್ರೋಧವ ಲೋಭ ಮೋಹವ
ಬಿಡುಬಿಡು ಚಿಂತಿಸು ನೀನಾರು
ಆತ್ಮಜ್ಞಾನವ ಪಡೆಯದ ಮೂಢರು
ದುಃಖದ ಕೂಪದಿ ಬೀಳುವರು || ೨೬ ||

ಭಗವದ್ಗೀತೆಯ ತತ್ವಗಳನ್ನು
ಪಠಿಸುತ ಕೃಷ್ಣನ ನೆನೆಯುತಿರು
ಸಜ್ಜನ ಸಂಗದಿ ನೀ ನೆಲೆಸುತ್ತ
ದೀನರಿಗೊಳ್ಳಿತ ಮಾಡುತಿರು || ೨೭ ||

ಭೋಗವೆ ರೋಗಕೆ ಕಾರಣವಹುದು
ದೇಹವು ರೋಗದ ಬೀಡಾಗುವುದು
ಮರಣವು ತಪ್ಪದು ಎಂಬುದ ಜನರು
ತಿಳಿದೂ ಪಾಪವ ಮಾಡುವರು || ೨೮ ||

ಮನದಲಿ ಶಾಂತಿಯ ನೆಲೆಸದು ಐಸಿರಿ
ಸ್ವಲ್ಪವು ಸೌಖ್ಯವ ನೀಡದದು
ಮಗನಿಗೆ ಕೂಡ ಭಯಪಡಬೇಕು
ಐಸಿರಿ ಮಹಿಮೆಯು ಹೀಗಿಹುದು || ೨೯ ||

ಪ್ರಾಣಾಯಮವು ಇಂದ್ರಿಯನಿಗ್ರಹ
ವಿವೇಕ ಪೂರಿತ ನಡವಳಿಕೆ
ಧ್ಯಾನಸಮಾಧಿ ಇತ್ಯಾದಿ ಎಲ್ಲ
ಒಳ್ಳಿತು ದಿವ್ಯದ ಜೀವನಕೆ || ೩೦ ||

ಗುರುವಿನ ಮಾತಲಿ ನಂಬಿಕೆ ಇಟ್ಟು
ಹಿಡಿಯೊ ಮುಕ್ತಿಯ ಹಾದಿಯನು
ಸಂಯಮದಿಂದ ಸಾಧನೆ ಮಾಡೆ
ನೋಡುವೆ ನಿನ್ನಲೆ ಬ್ರಹ್ಮನನು || ೩೧ ||

(19 ನೇ ಪುಟದಿಂದ)

ಶೀಲಂ ಹರೇರಥ ಗತಾದಿಗಮಂ ಶರಾರಿ
ತುರ್ಯ ಪ್ರಬಂಧಶತಕ್ಕೈ ರ್ದಶಭಿ ಜಗಾದ ||

ಈ ತಿರುವಾಯ್‌ಮೊಳಿಯ ಮೊದಲನೆಯ ಶತಕದಲ್ಲಿ ಕೈಂಕರ್ಯವನ್ನು ಎರಡನೆಯದರಲ್ಲಿ ಆ ಕೈಂಕರ್ಯವು ಕೇವಲ ಪಾರಾರ್ಥವಾಗಿರದೇಕೆಂಬ ಕೈಂಕರ್ಯನಿಯಮವನ್ನೂ, ಮೂರನೆಯದಲ್ಲಿ ಆ ಕೈಂಕರ್ಯವು ಭಾಗವತ ಪರ್ಯಂತವಾಗಿರಬೇಕೆಂಬ ಕೈಂಕರ್ಯ ಅವಧಿಯನ್ನೂ ನಾಲ್ಕನೆಯ ಶತಕದಲ್ಲಿ ಆ ಕೈಂಕರ್ಯ ವಿರೋದಿಯು ವಿಷಯ ಸುಖವೆಂದೂ, ಐದನೆಯ ಶತಕದಲ್ಲಿ ಆ ಕೈಂಕರ್ಯೋಪಾಯವು ಸಿದ್ಧೋಪಾಯವೆಂದೂ ಆರನೆಯ ಶತಕದಲ್ಲಿ ಅಂಥಾ ಸಿದ್ಧೋಪಾಯವು ಸ್ವೀಕಾರವೂ ಅವಶ್ಯಕವೆಂದೂ ಏಳನೆಯ ಶತಕದಲ್ಲಿ ಭಗವದ್ವಿರಹವನ್ನೂ, ಎಂಟನೆಯ ಶತಕದಲ್ಲಿ ಆಶೆಯಿಲ್ಲದೆ ಇರುವಿಕೆಯನ್ನೂ, ಒಂಬತ್ತನೆಯ ಶತಕದಲ್ಲಿ ಭಗವತ್ಸಭಾವವನ್ನೂ ಹತ್ತನೆಯ ಶತಕದಲ್ಲಿ ತಮಗೆ ಲಭಿಸಿದ ಭಗವತ್ಪ್ರಾಪ್ತಿ ರೂಪಫಲವನ್ನೂ ಕ್ರಮವಾಗಿ ಅನುಗ್ರಹಿಸಿದರು

ಅಳಹಿಯ ಮಣವಾಳ ಜೀಯರ್ ತಿರುವಡಿಗಳೇ ಶರಣಂ



ತತ್ರಾದಿಮೇ ತು ಶತಕೇ ದಶಕೇ ತದಾದ್ಯೇ
ಸಮ್ಯಗ್ಗುಣಾಕೃತಿ ವಿಭೂತಿ ಸಮೇತ ಮೀಶಂ |
ಅಧ್ಯಕ್ಷಯ್ಯ ಪರಮನುಗ್ರಹತಸ್ತದೀಯಾತ್
ತದ್ದಾಸ್ಯ ಯೋಜಿತಮನಾ ಶರಜಿದ್ಬಭೂವ ||
(ಉಯರ್ವರ -- ಕರವಿಶುಂಬು)

ಈ ತಿರುವಾಯ್ ಮೊಳಿಯ ಮೊದಲನೆಯ ಶತಕದ ಮೊದಲನೆಯ ದಶಕದಲ್ಲಿ ಕಲ್ಯಾಣ ಗುಣಗಳುಳ್ಳವುವನು, ದಿವ್ಯಮಂಗಳ ವಿಗ್ರಹ ವಿಶಿಷ್ಟನೂ ಉಭಯ ವಿಭೂತಿ ಸಮೇತನಾದ ಶ್ರಿಯ ಪತಿಯನ್ನು ಆತನ ನಿರ್ಹೇತುಕ ಕಟಾಕ್ಷದಿಂದ ಸಾಕ್ಷಾತ್ಕಾರಮಾಡಿದ ಶ್ರೀ ನಮ್ಮಾಳ್ವಾರರು ತಮ್ಮ ಮನಸ್ಸನ್ನು ಆ ಭಗವಚ್ಚರಣಾರವಿಂದ ಪರಿಚರ್ಯೆಯಲ್ಲಿ ನಿಯೋಗಿಸಿದರೆಂದು ಅಪ್ಪಣೆ ಕೊಡಿಸಿದರು

ಸಂಸಾರಿಣೋಪ್ಯನುಜಿಘೃಕ್ಷು ಅಸೌ ದಯಾಳು
ಅಲ್ಪಾಸ್ಥಿರೇತರ--ಪುಮರ್ಥರುಚಿಂ ನಿರಸ್ಯ |
ತತ್ಯಾಗ ಪೂರ್ವ ಹರಿಭಕ್ತಿ--ಸುಧಾಂಬುಧಾನಾಂ
ಉದ್ದೀಪಿನೀ ಮುಪದಿದೇಶ ಮುನಿರ್ದ್ವಿತೀಯೇ ||
(ವೀಡುಮಿ--ಶೇರ್‌ತ್ತ)

ಈ ಲೀಲಾವಿಭೂತಿಯಲ್ಲಿರುವ ಸಕಲ ಚೇತನರೂ ಸಂಸಾರದಲ್ಲಿ ಮುಳುಗಿ ದು ಖಿಸುತ್ತಿರಲು ಇವರ ಅಸಹ್ಯವಾದ ದುರವಸ್ಥೆಯನ್ನು ನೋಡಿ ಇವರಲ್ಲಿ ದಯವಿಟ್ಟು ನಮ್ಮಾಳ್ವಾರರು ಅಲ್ಪವೂ ಅಸ್ಥಿರವೂ ಆದ ಭಗವದ್ವ್ಯತಿರೇಕವಾದ ಇತರ ಕ್ಷುದ್ರ ಪುರುಷಾರ್ಥಗಳಲ್ಲಿ ಇವರಿಗೆ ಇರುವ ಅಭಿನಿವೇಶವನ್ನು ಹೋಗಲಾಡಿಸಿ ಭಗವಂತನಲ್ಲಿ ಭಕ್ತಿ ರಸವನ್ನು ಉಂಟುಮಾಡಿರುತ್ತಾರೆ



ಪತ್ತುಡೈ 1--3--11

ದೂರಸ್ಥಮಪ್ಯಥ, ಮುನಿ ಕಮಲಾಸಹಾಯಂ ಐಚ್ಛೈ
ಸಮುದ್ಭವ ಶತ್ಯೆ ಸುಲಭೀಭವನ್ತಂ |
ಆಖ್ಯಾಯ ಭಕ್ತಿಮಪಿ ತತ್ರ ವಿದಾಯ ತಸ್ಯ
ಸೇವಾಂ ಚಕಾಂಕ್ಷ, ಕರಣತ್ರಯತ ತೃತಿಯೇ ||

ಶ್ರಿಯ ಪತಿಯು ಪರಮಪದದಲ್ಲಿ ವಾಸಮಾಡುವನಾದಾಗ್ಯೂ ತನ್ನ ಸೌಲಭ್ಯ ಗುಣಗಳನ್ನು ಎಲ್ಲರಿಗೂ ತಿಳಿಸಿ ಅವರನ್ನು ವಶೀಕರಿಸಿಕೊಳ್ಳಬೇಕೆಂಬ ಆಸೆಯಿಂದ ಅನೇಕ ಅವತಾರಗಳನ್ನು ಮಾಡಿ ಆಯಾ ಅವತಾರಗಳಲ್ಲಿ ತನ್ನ ಭಕ್ತನಿಗೆ ಪರವಶನಾಗಿದ್ದ ಸೌಲಭ್ಯತೆಯನ್ನು ಹೇಳಿದ ನಮ್ಮಾಳ್ವಾರರು ಆತನಲ್ಲಿ ಭಕ್ತಿಯುಳ್ಳವರಾಗಿ ಮನೋವಾಕ್ಕಾಯಗಳೆಂಬ ತಮ್ಮ ತ್ರಿಕರಣಗಳಿಂದ ಆತನಿಗೆ ಕೈಂಕರ್ಯವನ್ನು ಮಾಡಬೇಕೆಂದು ಈ ಮೂರನೆಯ ದಶಕದಲ್ಲಿ ಆಶಿಸಿದರು

ಅಂಶಿರೈಯ 1--4--11

ತತ್ಕಾಂಕ್ಷಿತಾನಧಿಗಮೇನ ಮುನಿರ್ವಿಷಣ್ಣ
ಪ್ರಾಪ್ಯೋ ದಶಾಂ ಚ ಹರಿಭುಕ್ತ ವಿಯುಕ್ತ ನಾರ್ಯಾ |
ಸರ್ವಾಪರಾಧ ಸಹತಾ ಮವಬೋಧ್ಯ ದೂತ್ಯೆ
ಶೌರೇ ಸ್ವದೋಷಪರತಾ ಮಲುನಾಚ್ಚತುರ್ಥೇ ||

ನಮ್ಮಾಳ್ವಾರರು ದರ್ಶನ ಸಮಾನಾಕಾರವಾದ ಮಾನಸಾನುಭವದಿಂದ ಭಗವಂತನನ್ನು ಅನುಭವಿಸಿ ಆ ಭಗವಂತನನ್ನು ಆಲಿಂಗನೆಮಾ

ಡಲು ಆಶೆಪಟ್ಟರು ತರುವಾಯ ಆತನನ್ನು ಆಲಿಂಗಿಸಲು ಮಾಡಿದ ಯತ್ನ ಫಲಿಸದೇ ಹೋದದ್ದರಿಂದ ಬಹಳವಾಗಿ ಶೋಕಿಸಿ ಸರ್ವೇಶ್ವರನ ಸಮಸ್ತ ಚೇತನರ ಅಪರಾದಗಳನ್ನು ಸಹಿಸುವಿಕೆಯ ಗುಣವನ್ನು ನೆನೆದು ಇಂಥಾ ಗುಣವಂತನು ತನ್ನನ್ನು ತ್ಯಜಿಸಲಾರನೆಂದು ಯೋಚಿಸಿ ದೂತರ ಮೂಲಕ ಆ ಗುಣಗಳನ್ನು ತಿಳಿಸಿ ತನ್ನಲ್ಲಿರುವ ದೋಷಗಳನ್ನು ನೋಡು ತ್ತಿರುವ ಆತನ ದೋಷಾಸಕ್ತಿಯನ್ನು ಈ ನಾಲ್ಕನೆಯ ದಶಕದಲ್ಲಿ ಹೋಗ ಲಾಡಿಸಿದರು

ವಲವೇಳುಲಕು 1--5--11

ಸ್ವಾಲಿಂಗನಾದಿ--ಚಪಲೇ ಪುರುಷೋತ್ತಮೇ ಪಿ
ಸ್ವಾಯೋಗ್ಯತಾಮಭಿದಧ ದ್ವಿಮುಖಶ್ಶಠಾರಿ |
ತ್ರೈವಿಕ್ರಮಾದಿ ಚರಿತಂ ಪ್ರತಿದೋಧ್ಯ ತೇನ
ನೀತ ಸ್ವಶೀಲವಶತಾ ಮಥ ಪಂಚಮೇ ಭೂತ್ ||

ನಮ್ಮಾಳ್ವಾರರು ಸರ್ವೇಶ್ವರನ ಅಗಲಿಕೆಯನ್ನು ಹೊಂದಿ ಬಹಳ ದು ಖಿಸಿ ಓ ಶ್ರಿಯಃಪತಿಯೇ ತಾವು ನನ್ನ ಎಲ್ಲಾ ಅಪರಾಧಗಳನ್ನು ಸಹಿಸಿ ನಾನು ಮಾಡುವ ಕೈಂಕರ್ಯವನ್ನು ಸ್ವೀಕರಿಸಬೇಕೆಂದು ಪ್ರಾರ್ಥಿ ಸಲು ಆಗ ಭಗವಂತನು ಇವರ ಪ್ರಾರ್ಥನೆಯಂತೆ ಇವರಲ್ಲಿ ಸರ್ವವಿಧ ಸಂಶ್ಲೇಷಕ್ಕಾಗಿ ದಯಮಾಡಿಸಿದರು ಆಗ ಭಗವಂತನ ಉತ್ಕರ್ಷವನ್ನೂ ತನ್ನ ನಿಕರ್ಷವನ್ನೂ ಯೋಚಿಸಿ ಭಗವಂತನ ಮಹಿಮೆಗೆ ಹಾನಿ ಬರು ವುದೆಂಬ ಸಂಶಯವನ್ನು ಹೊಂದಿ ಭಗವಂತನ ವಿಶ್ಲೇಷವೇ ಮೇಲು ಎಂಬುವುದಾಗಿ ಯೋಚಿಸಿ ತಮ್ಮ ಸ್ವಭಾವಕ್ಕೆ ಅನುಗುಣವಾಗಿ ತ್ರಿವಿಕ್ರ ಮಾದಿ ಚರಿತೆಗಳನ್ನು ತಿಳಿಸಿದರು

ದಾಸ್ಯೇಷು ದೇಶ ಸಮಯಾಂಗ ಕಲಾಪ ಕರ್ತೃ
ದ್ರವ್ಯಾದಿನಾ ನ ನಿಯಮ ಪುರುಷೋತ್ತಮಸ್ಯ |
ಭಕ್ತಿಂ ಪರಂ ಬಹುಮತಾ ತತ ಏವ ಸೋಯಂ
ಸ್ವಾರಾಧ ಇತ್ಯುಪದಿದೇಶ ಮುನಿಸ್ತು ಷಷ್ಠೇ ||

ಶ್ರಿಯಃ ಪತಿಯ ಕೈಂಕರ್ಯಗಳಲ್ಲಿ ದೇಶ, ಕಾಲ ಉಪಕರಣ ಅಧಿ ಕಾರಿ, ದ್ರವ್ಯ ಮೊದಲಾದುದ ನಿಯಮವೇನೂ ಇಲ್ಲ ಭಕ್ತಿ ಮಾತ್ರ ಅಧಿಕವಾಗಿ ಕೊಂಡಾಡಲ್ಪಟ್ಟಿದೆ ಆ ಭಕ್ತಿಯಿಂದಲೇ ಆ ಭಗವಂತನು ಸುಲಭವಾಗಿ ಆರಾಧಿಸಲ್ಪಡುತಕ್ಕವನು ಎಂಬುವುದಾಗಿ ನಮ್ಮಾಳ್ವಾರರು ಆರನೆಯ ದಶಕದಲ್ಲಿ ಉಪದೇಶಿಸಿದರು

ಪಿರಲಿತ್ತುಯಾರ್ 1--7--11

ಪುಂಸ ಶ್ರಿಯ ಪ್ರಣಯಿನ ಪುರುಷಾರ್ಥಸೀಮ್ನೋ
ನಿಂದರ್ ಫಲಾಂತರಪರರ್ಾ, ನಿರವದ್ಯಗಂಧಾತ್
ತದ್ರಸ್ಯತಾರ್ಹ--ಗುಣಜಾತ ಸಮರ್ಧನೇನ
ತತ್ಸೇವನಂ ಸರಸಮಾಹ ಸ ಸಪ್ತಮೇನ ||

ಧರ್ಮಾರ್ಥಕಾಮ ಮೋಕ್ಷಗಳೆಂಬ ನಾಲ್ಕುವಿಧವಾದ ಪುರುಷಾರ್ಥ ಗಳಿಗಿಂತ ಉತ್ತಮ ಪುರುಷಾರ್ಥವು ಶ್ರಿಯ ಪತಿಯಾದ ಪರಮ ಪುರು ಷನನ್ನು ಸೇವಿಸಿ ಅದರ ಅನುಭವದಿಂದ ಪ್ರೀತಿಗೊಂಡು ಈ ವಿಭೂ ತಿಯಲ್ಲಿ ಚೇತನರು ಇಂಥಾ ಪರಮ ಭೋಗ್ಯನಾದ ಭಗವಂತನನ್ನು ಆಶ್ರಯಿಸಿ ಉಜ್ಜೀವಿಸದೇ, ಆತನಲ್ಲಿ ಕ್ಷುದ್ರ ಪುರುಷಾರ್ಥಗಳನ್ನು ಬೇಡಿ ನಾಶವಾಗುವುದು ಎಂಥಾ ಪಾಪ ಕಾರ್ಯವೆಂದು ಅವರನ್ನು ನಿಂದಿಸುತ್ತಾ

ನಮ್ಮಾಳ್ವಾರರು ಅಂಧವರಿಗೂ ರುಚಿಹುಟ್ಟುವಂತೆ ಭಗವಂತನ ಅನುಭವವುಪರಮ ಭೋಗ್ಯವಾಗಿರುವುದರಿಂದ ಅದೇ ಶ್ರೇಷ್ಠವಾದ ಫಲವೆಂದು ಈ ಏಳನೆಯ ದಶಕದಲ್ಲಿ ಹೇಳಿರುತ್ತಾರೆ

ಕೌಟಿಲ್ಯವತ್ಸುಕರಣ ತ್ರಿತಯೇಪಿ
ಜಂತುಷ್ವಾತ್ಮೀಯ ಮೇವ ಕರಣ ತ್ರಿತಯೈಕರೂಪ್ಯಂ |
ಸಂದರ್ಶ್ಯ ತಾನಪಿ ಹರಿ ಸ್ಸವಶೀಕರೋತೀತ್ಯಾ
ಚಖ್ಯ ಸಾಂದ್ರಕರುಣೋ ಮುನಿರಷ್ಟಮೇನ ||

ಈ ಲೀಲಾ ವಿಭೂತಿಯಲ್ಲಿರುವ ಮನುಷ್ಯರ ಮನೋವಾಕ್ಕಾಯಗಳೆಂಬ ಮೂರು ಕರಣಗಳೂ ಕ್ಷುದ್ರ ವಿಷಯಗಳಿಗೆ ವಶವಾಗಿರುವುದನ್ನು ನೋಡಿ ಸರ್ವೇಶ್ವರನು ಅವರಿಗೆ ತನ್ನ ಕರಣಗಳ ಏಕರೂಪತೆಯನ್ನು ಚೆನ್ನಾಗಿ ತೋರಿಸಿ ಅವರನ್ನೂ ಕೂಡ ತನಗೆ ವಶಮಾಡಿಕೊಳ್ಳುತ್ತಾನೆ ಎಂದು ಆ ಸರ್ವೇಶ್ವರನ ಆರ್ಜವಗುಣವನ್ನು ಎಂಟನೆಯ ದಶಕದಲ್ಲಿ ಹೇಳಿರುತ್ತಾರೆ

ಇವೈಯುಂ 1--9--11

ಆತ್ಮಾರ್ಜವಾನು ಭವ, ಕೌತುಕಿನೋಸ್ಯ ಶೌರಿ
ಆತ್ಮೋಪಭೋಗರುಚಿಮಪ್ಯಧಿಕಾಂ ದಧಾನ |
ದೇವ್ಯಾದಿವತ್, ರಸಯಿತಾ, ಕ್ರಮತೋಽಖಿಲಾಂಗಾ
ನ್ಯಶಿಶ್ರಯತ್ ತದವದನ್ನವಮೇ ಶಠಾರಿ ||

ಹಿಂದಿನ ತಿರುವಾಯ್ ಮೊಳಿಯಲ್ಲಿ ಸರ್ವೇಶ್ವರನ ಆರ್ಜವ ಗುಣವನ್ನನುಭವಿಸಿ ಉತ್ಸಾಹವನ್ನು ಹೊಂದಿರುವ ಆಳ್ವಾರರಿಗೆ ಸರ್ವೇಶ್ವರನು ತನ್ನ ಸಂಶ್ಲೇಷದಲ್ಲಿ ಅಧಿಕ ಪ್ರೀತಿಯನ್ನುಂಟು ಮಾಡಲು ಆಗ ಸರ್ವೇಶ್ವರನನ್ನು ಸಾಕ್ಷಾತ್ಕರಿಸಿ ಶ್ರೀ ದೇವಿ ಮೊದಲಾದವರಿಗೆ ಪ್ರೀತಿಯನ್ನುಂಟು ಮಾಡುವಂತೆ ತನಗೆ ರಸೋತ್ಪಾದನೆಯನ್ನು ಮಾಡಿ ತನ್ನ ಸಮಸ್ತವಾದ ಅಂಗಗಳನ್ನು ಕ್ರಮವಾಗಿ ಆಶ್ರಯಿಸಿದನೆಂದು ತನಗೆ ಪ್ರಸಾದಿಸಿದ ಸಾತ್ಮ ಭೋಗವನ್ನು ಈ ಒಂಬತ್ತನೆಯ ತಿರುವಾಯ್ ಮೊಳಿ ದಶಕದಲ್ಲಿ ಹೇಳಿದರು

ಪೊರುಮಾ 1--10--11

ಇತ್ಥಂ ಶ್ರಿಯ ಪತಿ ಕೃತ--ಸ್ವ--ಸಮಸ್ತ ದೇಹ--
ಸಂಶ್ಲೇಷ ಲಕ್ಷಣ ಫಲಸ್ಯ ಸುದುರ್ಲಭಸ್ಯ |
ಭಕ್ತ್ಯಾದಿ ವತ್ಸ್ವಗಣನೇಪಿ ಚ ತತ್ಪ್ರಸಾದಾತ್
ನಿರ್ಹೇತುಕತ್ವಂ ಅವದತ್ ದಶಮೇ ಶಠಾರಿ ||

ಸರ್ವೇಶ್ವರನು ನಮ್ಮಾಳ್ವಾರರಿಗೆ ಸಮಸ್ತ ಅವಯವಗಳಿಗೆ ಸಂಶ್ಲೇಷವನ್ನು ಉಂಟುಮಾಡಲು ಆಗ ಸಂತೋಷಪಟ್ಟು, ಇತರರಿಗೆ ಸುದುರ್ಲಭವಾದ ಈ ಫಲವೂ ತನಗೆ ಲಭಿಸಲು ಕಾರಣವೆಂದು ಚೆನ್ನಾಗಿ ಯೋಚಿಸಿ ಸರ್ವೇಶ್ವರನು ಸಮಸ್ತ ಪದಾರ್ಥಗಳಿಗೂ ಕಾರಣನಾಗಿರುವುದರಿಂದ ತನ್ನ ಭಕ್ತಿಗೂ ಆತನೇ ಕಾರಣನೆಂದೂ ಅದಕ್ಕೆ ಮತ್ತಾವ ಇತರ ಕಾರಣವಿಲ್ಲವೆಂದು ನಿಶ್ಚಯಿಸಿ ನಮ್ಮಾಳ್ವಾರರು ಸರ್ವೋಪಕಾರಕನಾದ ಶ್ರಿಯ ಪತಿಯು ನಿರ್ಹೇತುಕವಾಗಿ ತನಗೆ ಪ್ರಸಾದಿಸಿದ ಫಲಲಾಭದಿಂದ ಸರ್ವೇಶ್ವರನ ನಿರ್ಹೇತುಕೋಪಕಾರತ್ವವನ್ನು ಹತ್ತನೆಯ ದಶಕದಲ್ಲಿ ಅನುಗ್ರಹಿಸಿದರು

ಶ್ರೀ ವಾದಿಕೇಸರಿ ಅಳಹಿಯ ಮಣವಾಳ ಜೀಯರ್ ತಿರುವಡಿಗಳೇ ಶರಣಂ

ವಾಯುನ್ತಿರ್ಯೈಯುಗಳುಂ 2--1--11

ಪೂರ್ವಾನುಭೂತ--ಮುರವೈರಿ ಗುಣಾಭಿವೃದ್ಧ
ತದ್ಬಾಹ್ಯ ಸಂಗಮ ರುಚಿಸ್ತದಲಾಭಖಿನ್ನ
ಸರ್ವಾನಪಿ ಸ್ವಸಮ ದು ಖಿನ ಏವ ಭಾವಾನ್
ಆಹ ದ್ವಿತೀಯಶತಕಸ್ಯ ಶಠಾರಿರಾದ್ಯೇ ||

ಹಿಂದಿನ ತಿರುವಾಯ್ ಮೊಳಿಯಲ್ಲಿ ಸರ್ವೇಶ್ವರನ ಪರತ್ವ ಸೌಲಭ್ಯ ಸೌಂದರ್ಯ ಗುಣಗಳನ್ನು ಮಾನಸಿಕವಾಗಿ ಅನುಭವಿಸಿದ್ದರಿಂದ ಬಾಹ್ಯ ಸಂಶ್ಲೇಷದಲ್ಲಿ ರುಚಿ ಅಭಿವೃದ್ಧಿಯಾಗಿ, ಆ ಸಂಶ್ಲೇಷವು ಲಭಿಸದೇ ಹೋದದ್ದರಿಂದ ಬಹಳ ದುಃಖ ಪ ಟ್ಟ ವ ರಾ ಗಿ ಶಠಾರಿಯು ಶ್ರೀ ಲಕ್ಷ್ಮೀದೇವಿಯ ಭಾವವನ್ನು ಭಜಿಸಿ ಭಗವದ್ವಿಶ್ಲೇಷದಿಂದ ಪ್ರಾಪ್ತವಾದ ಅವಸ್ಥೆಯನ್ನು ಸಹಿಸಲು ಅಶಕ್ತರಾಗಿ ಸಮುದ್ರತೀರದಲ್ಲಿರುವ ಉದ್ಯಾನವನಕ್ಕೆ ಹೋಗಿ ಅಲ್ಲಿದ್ದ ಸಕಲ ಪದಾರ್ಥಗಳೂ ತಮ್ಮಹಾಗೆ ಭಗವದಲಾಭದಿಂದ ಬಾಧೆ ಪಡುತ್ತಿರುವಂತೆ ಭಾವಿಸಿ ಅವುಗಳನ್ನು ಕುರಿತು ತಾವು ಈ ಎರಡನೆಯ ಶತಕದ ಮೊದಲನೆಯ ತಿರುವಾಯ್ ಮೊಳಿ ದಶಕದಲ್ಲಿ ಶೋಕಿಸುವರು

ಕಿಳ್ಣ್ ವೀಡು ಮುತಲ್ ಮುಳುತುಮಾಯ್

ಸಂಶ್ಲಿಷ್ಯ ದುಃಖಶಮನಾನುದಿತ ಪ್ರಸಂಗಾತ್
ತನ್ಮೂಲ ಮಬ್ಜನಯನಸ್ಯ ಮಹೇಶ್ವರತ್ವಂ |
ಆಹಾನ್ವಯಾದಿತರತೋಪಿ ಮನುಷ್ಯಭಾವೇ
ಪೌರಾಣಿಕೋಕ್ತ--ನಯತ ಶಠಜಿ ದ್ವಿತೀಯೇ ||

ಕೆಳಗಿನ ತಿರುವಾಯ್ ಮೊಳಿಯಲ್ಲಿ ನಮ್ಮಾಳ್ವಾರರು ತಮಗೆ ಪ್ರಾಪ್ತವಾದ ವಿಶ್ಲೇಷವನ್ನು ಸಹಿಸಿದವರಾಗಿ ದು ಖಿಸುತ್ತಿರಲು ಭಗವಂತನು ಆಳ್ವಾರೊಡನೆ ಸಂಶ್ಲೇಷಿಸಿ ಅವರ ದು ಖವನ್ನು ಹೋಗಲಾಡಿಸಿ ಪರಮಾನಂದವನ್ನು ಪ್ರಸಾದಿಸಿದನು ಆಗ ಅಂಥಾ ಆನಂದವು ತಮಗೆ ಹೇಗೆ ಪ್ರಾಪ್ತವಾಯಿತೆಂದು ಆಲೋಚಿಸಲು ಕಾರಣವು ಸಮಸ್ತ ಕಲ್ಯಾಣ ಗುಣಗಳಿಂದೂ ಅವುಗಳಿಗೆ ಕಾರಣ ಆತನ ಸರ್ವೇಶ್ವರತ್ವವೆಂದೂ ತಿಳಿದು, ಆ ಸರ್ವೇಶ್ವರತ್ವವು ಅನ್ವಯ ವ್ಯತಿರೇಕಗಳಿಂದಲೂ ಪೌರಾಣಿಕರ ಪ್ರಕ್ರಿಯೆಯಾದ ವೈಯಧಿಕರಣ್ಯದಿಂದಲೂ ಎಂದು ಈ ಎರಡನೆಯ ದಶಕದಲ್ಲಿ ಉಪದೇಶಿಸಿರುತ್ತಾರೆ

ಊನಿಲ್‌ವಾಳ್

ಅನ್ತಸ್ಥ ಸರ್ವರಸಂ ಅಂಬುಜಲೋಚನಸ್ಯ
ಸಂಯೋಗರೂಪಮವಗಾಹ್ಯ ಸುಖಾಮೃತಾಬ್ಧಿಂ |

ತದ್ದೇಶಿಕ ಪ್ರಥಮಸೂರಿ ಗಣ್ಯೈ ಕದಾ ಸ್ಯಾತ್
ಸಂಗೋ ಮಮೇ ತ್ಯಕಥಯತ್ ಸ ಮುನಿಸ್ತೃತೀಯೇ ||

ತಮ್ಮ ಆರ್ತಿ ತೀರುವಂತೆ ಸರ್ವೇಶ್ವರನು ತಮ್ಮಲ್ಲಿ ಸಂಶ್ಲೇಷಿಸಲು ಆಗ ಭಗವತ್ಸಂಶ್ಲೇಷವೆಂಬ ಅಮೃತಸಾಗರದಲ್ಲಿ ಸಮಸ್ತ ರಸಗಳೂ ಉಂಟಾಗುವಂತೆ ಅವಗಾಹಿಸಿ ಅದು ಬಹಳ ಭೋಗ್ಯವಾಗಿದ್ದುದರಿಂದ ತಾವೊಬ್ಬರೇ ಅನುಭವಿಸಲು ಅಶಕ್ಯರಾಗಿ ಇಂಥಾ ಆನಂದವನ್ನು ತಮ್ಮೊಡನೆ ಕೂಡ ಅನುಭವಿಸುವವರು ಯಾರೆಂದು ನೋಡಲು ಸಂಸಾರಿಗಳಲ್ಲಿ ಒಬ್ಬರನ್ನೂ ಕಾಣದೆ ನಿತ್ಯಸೂರಿಗಳೊಡನೆ ಕಲೆತು ಭಗವದನುಭವವನ್ನು ಹೊಂದುವುದೇ ಎಂದಿಗೋ ಎಂದು ಆಳ್ವಾರರು ಆರ್ತರಾದರು

ಆಡಿಯಾಡಿ

ತತ್ರಾರ್ಥಿತಾ ನಧಿಗಮೇನ ಸಮುತ್ಥಿತಾರ್ತಿ
ಅಗ್ರೇ ಹರೇಃ ಪರಮುಖೇನ ಯಥಾ ವಿಧೇಯಂ |
ಆರ್ತೇತಿ ನಿವೇದನಂ ಅಪಾಕರಣಾರ್ಥಂ ಚ
ಮೂರ್ಛಾಸ್ತಥಾ ಮುನಿ ಅಗಾತ್ ಮಹತೀಂ ಚತುರ್ಥೇ ||

ತಾವು ಪ್ರಾರ್ಥಿಸಲ್ಪಟ್ಟ ನಿತ್ಯಸೂರಿಗಳೊಡನೆ ಭಗವದನುಭವವು ಲಭಿಸದೇ ಹೋದದ್ದರಿಂದ ಜನಿಸಿದ ದುಃಖವುಳ್ಳವರಾಗಿ ನಮ್ಮಾಳ್ವಾರರು ಭಗವಂತನ ಮುಂದುಗಡೆ ಇತರರ ಮುಖೇನ (ಮಧುರಕವಿ ಮೊದಲಾದ ಜ್ಞಾನ ಸುಹೃತ್‌ಗಳ ಮುಖೇನ) ಇವರ ವ್ಯಾಮೋಹವನ್ನು ಭಗವಂತನಿಗೆ ಅರಿಕೆ ಮಾಡಿ ಅದನ್ನು ಹೋಗಲಾಡಿಸಲು ಪ್ರಾರ್ಥಿಸುವಂತೆ ಈ ನಾಲ್ಕನೆಯ ದಶಕದಲ್ಲಿ ವಿಶೇಷವಾಗಿ ಮೂರ್ಛಿತರಾದರು

ಅಂದಾಮತ್ತನ್ನು

ಆಗಮ್ಯ ಸೂರಿಸಹಿತ ಸಮ ಪ್ರಾಕೃತಾರ್ತಿ
ಅತ್ಯುಜ್ವಲ್ ಮರಕತಾಚಲ ಸನ್ನಿಭಾಂಗ
ಈಶಃ ಪ್ರಫುಲ್ಲ ಕಮಲಾಕ್ಷಿ ಕರಾಂಘ್ರಿಃ ಆಸೀತ್
ತತ್ ಪಂಚಮೇ ಸಕಥಯನ್ಮುನಿರಾನನಂದ ||

ಸರ್ವೇಶ್ವರನು ನಿತ್ಯಸೂರಿಗಳೊಡನೆ ತಮಗೆ ದರ್ಶನವನ್ನು ಕೊಟ್ಟು ಅವರ ಆರ್ತಿಯನ್ನು ಹೋಗಲಾಡಿಸಿದ್ದರಿಂದ ನಿರವಧಿಕತೇಜೋಮಯವಾದ ದಿವ್ಯ ಮಂಗಳ ವಿಗ್ರಹವನ್ನುಳ್ಳವನಾದನೆಂದು ಈ ಐದನೆಯ ದಶಕದಲ್ಲಿ ಆಳ್ವಾರರು ಪ್ರಸಾದಿಸಿದರು

ವೈಕುಂದಾ

ನೀಚಂ ತು ಮಾಮಧಿಗತೋಯಮಿತಿ ಸ್ವಸೂಕ್ತ್ಯಾ
ಜಾತಾಂ ಹರೇ ಸ್ವವಿರಹಾಗಮನೇತಿ ಶಂಕಾಂ |
ಷಷ್ಠೇ ನಿರಸ್ಯ ದೃಢಸಂಗ--ಗಿರಾ ಶರಾರಿ
ಆತ್ಮಾನ್ವಯಿಷ್ವಪಿ ತದಾದರತೋ ಭ್ಯನಂದತ್ ||

ಸಮಸ್ತ ಕಲ್ಯಾಣ ಗುಣಾತ್ಮಕನಾದ ಸರ್ವೇಶ್ವರನು ಪರಿಪೂರ್ಣನಾಗಿ ಆಳ್ವಾರೊಡನೆ ಸಂಶ್ಲೇಷಿಸಲು ಅವರು ಸಂತುಷ್ಟರಾದರು ಆಗ ಅವರು

ತಮ್ಮ ನೈಚ್ಯವನ್ನು ಅನುಸಂಧಿಸಿ ಭಗವಂತನು ಅಗಲಿದರೆ ನಾನು ಏನು ಮಾಡಲಿ ಎಂಬುವ ಭಯವನ್ನು ಹೊಂದಿ ಸರ್ವೇಶ್ವರನನ್ನು ಕುರಿತು ತಾನು ಭಗವಂತನಿಂದ ಅಗಲಲು ಅಸಮರ್ದನೆಂದು ಆರನೆಯ ದಶಕದಲ್ಲಿ ಭಗವಂತನಲ್ಲಿ ತಮ್ಮ ಭಯವನ್ನು ಸಂಪೂರ್ಣವಾಗಿ ನಿವರ್ತನೆ ಮಾಡಿದರು

ಕೇಶರ್ವ ತಮರ್

ತೇ ಕೇಶವಾಭಿಮತತಾ ಮಭಜಂತ ಹಂತ
ಯೇ ಮಾಮಕಾ, ಇತಿ, ವದನ್ನದಿ ಸಪ್ತಮಂ ಸ |
ತಸ್ಯ ಸ್ವರೂಪ ಗುಣ ಚೇಷ್ಟಿತ ವಾಚಿನಾಮ
ಭೂತ ದ್ವಿಷಟ್ಕ ಮುಖರೋ ಮುಮುದೇ ಮುನೀಂದ್ರ ||

ಸರ್ವೇಶ್ವರನು ತಮ್ಮಲ್ಲಿ ಕೂಡಿದ್ದರಿಂದ ಆತನಿಗೆ ತಮ್ಮಲ್ಲಿ ಜನಿಸಿದ ಪ್ರೀತ್ಯತಿಶಯವು ತಮ್ಮ ಸಂಬಂದಿ ಸಂಬಂದುಗಳ ಪರ್ಯಂತವು ಪ್ರವಹಿಸಿದ್ದನ್ನು ಕಂಡು ಅತ್ಯಾಶ್ಚರ್ಯವನ್ನು ಹೊಂದಿದವರಾಗಿ ಆಳ್ವಾರರು ತಮ್ಮನ್ನು ಕಟಾಕ್ಷಿಸಿರುತಕ್ಕ ಆತನ ಸ್ವರೂಪಗುಣ ಚೇಷ್ಟಿತ ವ್ಯಾಪಾರಗಳಿಗೆ ವಾಚಕಗಳಾದ ಕೇಶವಾದಿ ದ್ವಾದಶ ನಾಮಗಳನ್ನು ಈ ಏಳನೆಯ ದಶಕದಲ್ಲಿ ಅನುಭವಿಸಿ ಆನಂದಪಟ್ಟರು

ಅಣೈವದು

ಆತ್ಮಾನ್ವಯಿಷ್ವಪಿ ಹರೇಃ ಪ್ರಿಯತಾಮ ವೇಕ್ಷ್ಯ
ಸರ್ವಾತ್ರನ ಸ್ವಜನಯನ್ನುನಿ ರಷ್ಟಮೇನ |
ಮೋಕ್ಷಪ್ರದತ್ವ ಮುಪದಿಶ್ಯ ತದಾಭಿಮುಖ್ಯಾ
ಲಾಭಾತ್ ಸ್ವಲಾಭ ಮಧಿಕಂ ಬಹು ಮನ್ಯತೇ ಸ್ಮ ||

ತಮ್ಮಲ್ಲಿ ಮಾತ್ರವೇ ಅಲ್ಲದೆ ತಮ್ಮ ಸಂಬಂದಿಗಳೊಡನೆಯೂ ಕೂಡ ಸರ್ವೇಶ್ವರನಿಗೆ ಉಂಟಾದ ಪ್ರೀತ್ಯತಿಶಯವನ್ನು ನೋಡಿ ಸರ್ವ ಚೇತನಗಳೊಡನೆಯೂ ಕೂಡ ತಮ್ಮಂತೆಯೇ ಮಾಡಬೇಕೆಂದು ನಿಶ್ಚಯಿಸಿದವರಾಗಿ ಆಳ್ವಾರರು ಅವರಿಗೆ ಈಶ್ವರನು ಮೋಕ್ಷಪ್ರದನೆಂದು ಉಪದೇಶಿಸಲು ಈ ಉಪದೇಶವು ವ್ಯರ್ದವಾದುದನ್ನು ನೋಡಿ ನಾವೂ ಇವರಂತೆ ಆಗದೇ ಭಗವದಾಭಿಮುಖ್ಯವನ್ನು ಹೊಂದಿದರು ಎಂದು ಈ ಏಳನೆಯ ದಶಕದಲ್ಲಿ ಹೃಷ್ಟರಾದರು

ಎಮ್ಮಾವೀಡು

ಮೋಕ್ಷಾದರಂ ಸ್ಫುಟ ಮವೇಕ್ಷ್ಯ ಮುನೇರ್ಮುಕುಂದೇ
ಮೊಕ್ಷಂ ಪ್ರದಾತುಂ ಅಸದೃಕ್ಷಫಲಂ ಪ್ರವೃತ್ತೇ |
ಆತ್ಮೇಷ್ಟಮಸ್ಯ ಪದಕಿಂಕರತೈಕ ರೂಪಂ
ಮೋಕ್ಷಾಖ್ಯವಸ್ತು ನವಮೇ ನಿರಣಾಯಿ ತೇನ ||

ಆಳ್ವಾರರಿಗೆ ಮೋಕ್ಷದಲ್ಲಿನ ಅಭಿನಿವೇಶವನ್ನು ಸರ್ವೇಶ್ವರನು ನೋಡಿ ಇವರಿಗೆ ಮೋಕ್ಷವನ್ನು ಕೊಡಲು ಆರಂಭಿಸಿದಾಗ ಇವರು ಪರಮ ಪದವು ನನಗೆ ಅಪೇಕ್ಷಿತವಲ್ಲವು ನಿನ್ನ ಪಾದಾರವಿಂದಗಳಲ್ಲಿ ನಿತ್ಯ ದಾಸ್ಯವೇ ಅಪೇಕ್ಷ್ಯ ಎಂದು ಈ ಒಂಬತ್ತನೆಯ ದಶಕದಲ್ಲಿ ಪರಮ ಪ್ರಾಪ್ಯವನ್ನು ನಿರಾಕರಿಸಿದರು

ಕಿಳರೊಳಿ

ಏತನ್ನಿಜಾರ್ಥಿತ ಮಿಹೈವ ಹರಿ ಪ್ರದಾತುಂ
ಆಸೇದಿವಾ್ ವನಮಹೀಧರ ಮಿತ್ಯವೇಕ್ಷ್ಯ |
ಪ್ರಾಪ್ಯಂ ತಮೇವ ಚ ತದನ್ವಯಿನಂ ಚ ಸರ್ವಂ
ಪ್ರಾಚೀಕರತ್ಸ ದಶಮೇ ದಶಕೇ ಮುನೀಂದ್ರ ||

ತಮ್ಮಿಂದ ಯಾಚಿಸಲ್ಪಟ್ಟು ಪ್ರಾಪ್ಯವನ್ನು ಈ ಲೀಲಾವಿಭೂತಿಯಲ್ಲೇ ತಮಗೆ ಪ್ರಸಾದಿಸಲು ಸರ್ವೇಶ್ವರನು ತಿರುಮಾಲಿರುಶೋಲೈ ಎಂಬುವ ದಿವ್ಯ ತಿರುಪತಿಯಲ್ಲಿ ದಯಮಾಡಿಸಿರುವನೆಂದು ಆಲೋಚಿಸಿ ಆಳ್ವಾರರು ಶ್ರಿಯ ಪತಿಗೆ ನಿತ್ಯವಾಸಸ್ಥಾನವಾದ ಆ ಊರಿನ ಸಮಸ್ತ ವಸ್ತುಗಳೇ ಸರ್ವ ಚೇತನರಿಗೆ ಪರಮ ಪ್ರಾಪ್ಯವೆಂದು ಈ ಎರಡನೆಯ ಶತಕದ ಹತ್ತನೆಯ ದಶಕದ ತಿರುವಾಯ್‌ಮೊಳಿಯಲ್ಲಿ ಉಪದೇಶಿಸಿದರು

ಮುಡಿಚ್ಚೋದಿ

ಆದ್ಯೇ ತೃತೀಯ ಶತಕಸ್ಯ ವನಾದ್ರಿಭರ್ತು
ಆಪಾದ ಮೌಳ್ಯವಯ ವಾಭರಣಾಭಿರೂಪ್ಯಂ |
ಬ್ರಹ್ಮಾದಿ ವಾಗವಿಷಯಂ ಚ ಮಹಾಪ್ರಭಾವಂ
ಸೌಂದರ್ಯಮಗ್ನ--ಹೃದಯ ಶರಜಿತ್ ಶಶಂಸ ||

ಮೂರನೆಯ ಶತಕದ ಮೊದಲನೆಯ ದಶಕದಲ್ಲಿ ತಿರುಮಾಲಿರುಂಶೋಲೈಯ ಅಧಿಪತಿಯಾದ ಅಳಗರ ಪಾದಗಳಾರಭ್ಯ ಶಿರಸ್ಸಿನವರೆಗೂ ಅಂಗಾಂಗಗಳಲ್ಲಿ ಧರಿಸಿರುವ ಆಭರಣಗಳ ಅನುರೂಪವನ್ನು ಬ್ರಹ್ಮಾದಿಗಳ ವಾಕ್ಕಿಗೂ ಗೋಚರವಲ್ಲದ ಮಹಾಪ್ರಭಾವವನ್ನು ಸೌಂದರ್ಯದಲ್ಲಿ ಮುಳುಗಿದ ಮನಸ್ಸುಳ್ಳ ಶ್ರೀ ನಮ್ಮಾಳ್ವಾರರು ಹೇಳಿದರು

ಮುನ್ನೀರ್

ಸಂಕೋಚಿತ ಸ್ವಕರಣಸ್ಸ ಹರಿಂ ಯಥೇಷ್ಟಂ
ಭುಂಜೇ ನ ಚಾಹಮಿತಿ ಭಿನ್ನಮತಿಶ್ಶರಾರಿ |
ಆಶ್ವಾಸಿತಶ್ಚ ಹರಿಣಾ ಸ್ವಮಹತ್ತಯೈವ
ಭೋಗೇ ಪ್ವಶಕ್ತಿರಿತಿ ತತ್ಕಧಿತಂ ದ್ವಿತೀಯೇ ||

ಅಳಗರ ಸೌಂದರ್ಯಾದಿ ಕಲ್ಯಾಣ ಗುಣಗಳನ್ನು ಅನುಭವಿಸಲು ಪ್ರಾರಂಭಿಸಿದ ಆಳ್ವಾರರು ಅವನ್ನು ಸಂಪೂರ್ಣವಾಗಿ ಅನುಭವಿಸಲು ಅಸಮರ್ಥರಾಗಿ ಇದು ತನ್ನ ಇಂದ್ರಿಯ ಸಂಕೋಚದಿಂದ ಆದುದ್ದೆಂದು ತಿಳಿದು ಬಹಳ ದುಃಖಿತರಾದರು ಆಗ ಸರ್ವೇಶ್ವರನು ಇವರ ವ್ಯಸನವನ್ನು ಕಂಡು 'ನೀವು ದು ಖಿಸ ಕೂಡದು ನನ್ನನ್ನು ಪೂರ್ತಿಯಾಗಿ ಅನುಭವಿಸಲು ಆಗದ ಸಂಕೋಚವು ನಿಮ್ಮ ಇಂದ್ರಿಯಗಳ ಸಂಕೋಚದಿಂದ ಆದುದ್ದಲ್ಲ, ನಿಮ್ಮ ಹಾಗೆ (ಕರಣ) ಇಂದ್ರಿಯಗಳ ಸಂಕೋಚವಿಲ್ಲದ (ನಿತ್ಯಸೂರಿಗಳೂ) ನಿಮ್ಮಂತಯೇ ನನ್ನನ್ನು ಸಂಪೂರ್ಣವಾಗಿ ಅನುಭವಿಸಲು ಶಕ್ತರಲ್ಲ ಇದಕ್ಕೆ ನನ್ನ ಮಾಹಾತ್ಮ್ಯೆಯೇ ಕಾರಣ' ಎಂಬುವುದಾಗಿ ಆಳ್ವಾರರನ್ನು ಸಮಾಧಾನ ಪಡಿಸಲು ಅವರು ಸಮಾದಾನ ಚಿತ್ತರಾದರು

ಒಳವಿಲ್

ಸರ್ವತ್ರ ಸರ್ವಸಮಯೇ ಸಕಲಾ ಸ್ವವಸ್ಥಾಸು
ಅಭ್ಯರ್ಥಯನ್ ನಿಖಿಲದಾಸ್ಯ ರಸಾನುನೀಂದ್ರ |
ಶ್ರೀವೇಂಕಟಾದ್ರಿನಿಲಯಸ್ಯ ಪರಸ್ಯ ಪುಂಸ
ನಿಸ್ಸೀಮ--ಶೀಲ--ಗುಣ ಮಪ್ಯವದತ್ತೃತೀಯೇ ||

ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಲ್ಲಿ ಸಕಲ ವಿದ ಕೈಂಕರ್ಯಗಳನ್ನು ಸರ್ವೇಶ್ವರನಲ್ಲಿ ಆಳ್ವಾರರು ಯಾಚಿಸಿ ಸರ್ವೇಶ್ವರನ ನಿರವಧಿಕ ಕಲ್ಯಾಣಗುಣಗಳನ್ನು ಈ ಮೂರನೆಯ ತಿರುವಾಯ್ ಮೊಳಿಯಲ್ಲಿ ಹೇಳಿದರು

ಸರ್ವಂ ಜಗತ್ಸಮವಲೋಕ್ಯ ವಿಭೋಶ್ಯರೀರಂ
ತದ್ವಾಚಿನಶ್ಚ ಸಕಲಾನಪಿ ಶಬ್ದರಾಶೀನ್ |
ತಾನ್ಭೂತ ಭೌತಿಕ ಮುಖಾನ್ಯದರ್ಯ ಪರಾರ್ದಾನ್
ದಾಸ್ಯಂ ಚಕಾರ ವಚಸೈವ ಮುನಿಶ್ಚತುರ್ಥೇ ||

ಸಕಲ ಲೋಕಗಳೂ ಸಕಲ ಪದಾರ್ಥಗಳಿಗೆ ವಾಚಕಗಳಾದ ಸಕಲ ಶಬ್ದಗಳೂ ಸರ್ವೇಶ್ವರನಿಗೆ ಶರೀರವಾಗಿ ಸಾಕ್ಷಾತ್ಕರಿಸಿ ಸಕಲ ಪದಾರ್ಥಗಳು ಆತನ ಶರೀರವೆಂದು ಹೇಳುವವರಾಗಿ ಆಳ್ವಾರರು ಈ ನಾಲ್ಕನೆಯ ತಿರುವಾಯ್ ಮೊಳಿಯಲ್ಲಿ ವಾಚಾ ಕೈಂಕರ್ಯವನ್ನು ಮಾಡಿದರು

ಮೊಯ್‌ಮ್ಮಾ

ಪೂರ್ವೇಣ ದಾಸ್ಯವಿಧಿನಾ ಪುರುಷಾರ್ಥಸೀಮ್ನಾ
ಹರ್ಷ ಪ್ರಕರ್ಷ ವಿವಶ ಖಲು ಪಂಚಮೇ ಸ |
ಆನಂದನ್ಯೈ ರವಿಕೃತಾನ್ವಿನಿ ಇಂದ ಮೂರ್ಖಾನ್
ಶೌರೇರ್ಗುಣೈಸ್ತು ವಿಕೃತಾನ್ ಪ್ರಶಶಂಸ ಭೂಯ ||

ಆಳ್ವಾರರು ಭಗವದನುಭವವನ್ನು ಹೊಂದಿ ಅದರ ಅನುಭವ ಜನಿತ ಹರ್ಷ ಪ್ರಕರ್ಷದಿಂದ ಭಗವಂತನ ದಿವ್ಯವಾದ ಕಲ್ಯಾಣ ಗುಣಗಳನ್ನು ಅನುಸಂಧಾನಮಾಡಿ ಯಾವ ವಿಕಾರವನ್ನೂ ಹೊಂದದ ಮೂರ್ಖರನ್ನು ಬಹಳವಾಗಿ ದೂಷಿಸಿ ಅಂಥ ಭಗವದ್ದಿವ್ಯ ಗುಣಾಮೃತದಲ್ಲಿ ಮುಳುಗಿ ವಿಕೃತವಾಗಿ ಲೋಕ ವಿಲಕ್ಷಣರಾದವರನ್ನು ಬಹಳವಾಗಿ ಕೊಂಡಾಡಿದರೆಂದು ಐದನೆಯ ತಿರುವಾಯ್ ಮೊಳಿಯಲ್ಲಿ ಹೇಳಿದರು

ಶೆಯ್ಯತಾಮರೈ

ತಾನ್ನಿಂದಿತಾನಪಿ ವಿಹಾತು ಮಸಾವಶಕ್ತ
ಶೌರೇ ದುರಾಸದತಯಾ ವಿಮುಖಾನ್ವಿಚಾರ್ಯ |
ಅರ್ಚಾವತಾರ ಸುಲಭತ್ವ ಮುವಾಚ ತೇಷಾಂ
ಏವಂ ಚ ತೇಷು ವಿಮುಖೇಷು ಶುಶೋಚ ಷಷ್ಠೇ ||

ಐದನೆಯ ತಿರುವಾಯ್ ಮೊಳಿಯಲ್ಲಿ ತನ್ನಿಂದ ನಿಂದಿಸಲ್ಪಟ್ಟ ಆ ಭಾಗವತವಿಮುಖವನ್ನು ಕುರಿತು ಇವರಿಗೆ ಭಗವಂತನಲ್ಲಿ ವೈಮುಖ್ಯ

ಉಂಟಾಗಲು ಕಾರಣವೇನೆಂದು ಯೋಚಿಸಿ ಭಗವಂತನು ಸರ್ವ ಸುಲಭನಾಗಿಲ್ಲದೇ ಇರುವಿಕೆಯೇ ಕಾರಣವೆಂದು ನಿಶ್ಚಯಿಸಿ, ಆಳ್ವಾರರು ಆರನೆಯ ತಿರುವಾಯ್ ಮೊಳಿಯಲ್ಲಿ ಅರ್ಚಾವತಾರದ ಸೌಲಭ್ಯವನ್ನು ಉಪದೇಶಿಸಿದರೂ ಅಂಥ ಉಪದೇಶವು ನಿರರ್ಥಕವಾದುದನ್ನು ಕಂಡು ಶೋಕಿಸಿದರು

ಪಹಿಲುಮ್

ತಚ್ಛೋಕ ಶಾಂತಿ ವಿದಯೇ ಹರಿಣಾ ಪ್ರಸಾದಾತ್
ಆವಿಷ್ಕೃತಾನ್ ಸ್ವಗುಣ ಚೇಷ್ಟಿತ ಭೋಗಶೀಲಾನ್ |
ಆಲೋಕ್ಯ ವೈಷ್ಣವ ಜನಾನ್ ಮುನಿರಾತ್ಮನಾರ್ದಾ
ಆಖ್ಯಾಯ ತಾ ನತಿಜಹರ್ಷ ಚ ಸಪ್ತಮೇ ಸ ||

ತನ್ನ ಭಗವತ್ ಸೌಲಭ್ಯೋಪದೇಶವು ಚೇತನರಲ್ಲಿ ನಿರರ್ದಕವಾದುದ್ದನ್ನು ನೋಡಿ ಹಿಂದಿನ ತಿರುವಾಯ್ ಮೊಳಿಯಲ್ಲಿ ದು ಖಿಸಿದ ಆಳ್ವಾರುಗಳ ಶೋಕವನ್ನು ಕಂಡ ಸರ್ವೇಶ್ವರನು ಸಹಿಸದೇ ಆ ಶೋಕವನ್ನು ಶಮನ ಮಾಡುವುದಕ್ಕಾಗಿ ಶ್ರೀ ವೈಷ್ಣವರನ್ನು ತೋರಿಸಲು ಆಗ ಆಳ್ವಾರರು ಅವರನ್ನು ಭಗವದ್ಗುಣ ವ್ಯಾಪಾರಗಳನ್ನು ಅನುಭವಿಸುವ ಸ್ವಭಾವವುಳ್ಳವರಾಗಿ ಕಂಡು ತನಗೆ ನಾದಭೂತರೆಂದು ಅವರನ್ನು ಶ್ಲಾಘಿಸಿ ಈ ಏಳನೆಯ ತಿರುವಾಯ್ ಮೊಳಿಯಲ್ಲಿ ಬಹಳವಾಗಿ ಕೊಂಡಾಡಿದ್ದಾರೆ

ಮುಡಿಯಾನೆ

ಅತ್ಯುತ್ಕಟ್ಯೈ ಇಹ ಮನೋರಥ ಜಾಲಪೂರ್ತ್ಯೈ
ನೀತೋ ಮುನಿರ್ಭಗವತಾ ಸಹ ಸಂಗಕಾಮ |
ಸರ್ವೇಂದ್ರಿಯೈರಪಿ ಚ ಕಿಂಕರಭಾವಸಕ್ತ
ಶ್ರೀಕಾಂತ ಮೇವ ಸುಗುಣಾಂಬುದಿಮಾಪ್ತು ಮೈಚ್ಛತ್ ||

ಈ ಎಂಟನೆಯ ದಶಕದಲ್ಲಿ ನಮ್ಮಾಳ್ವಾರರು ಶ್ರಿಯ ಪತಿಯ ಗುಣಾನುಭವಕ್ಕಾಗಿ ತಮ್ಮ ಸರ್ವ ಇಂದ್ರಿಯಗಳು ನಿಶ್ಚಲ ಪ್ರೇಮದಿಂದ ಸ್ವಪ್ರವೃತ್ತಿಗಳನ್ನು ಅಪೇಕ್ಷಿಸಿದ ಅನೇಕ ಪ್ರಕಾರಗಳನ್ನು ವರ್ಣಿಸಿ ತಮ್ಮ ಅಭೀಷ್ಠ ನೆರವೇರುವ ಕಾಲವನ್ನು ನಿರೀಕ್ಷಿಸುವ ಬಗೆಯನ್ನು ತಿಳಿಸಿದ್ದಾರೆ

*ಈ ದಶಕಕ್ಕೆ ಅಳಗಿಯ ಮಣವಾಳ ಜೀಯರ್ ಕೃಪೆಮಾಡಿರುವ ಶ್ಲೋಕವು ಲಭ್ಯವಾಗಿಲ್ಲ ಆದುದರಿಂದ ಶ್ರೀಮತ್ ಕಲ್ಕಿ ನರಸಿಂಹಾಚಾರ್ಯರಿಂದ ವಿರಚಿತವಾದ ಈ ಶ್ಲೋಕವನ್ನು ಇಲ್ಲಿ ತಿಳಿಸಿದೆ

ಶೊನ್ನಾಲ್

ಅನ್ಯಸ್ತವೇನ ವಿಷಯಾನಧಿಗಂತು ಮಿಚ್ಛನ್
ಆಲೋಕ್ಯ ವಿಸ್ಮೃತ ನಿಜ ವ್ಯಸನೋ ದಯಾಳು |
ತಸ್ಮಾನ್ನಿವಾರ್ಯ ಮನುಜಾ ನ್ವಿಫಲಸ್ಯ ಶೌರೇ
ರನ್ವೇ ಷ್ವನರ್ಹಕರಣಂ ನವಮೇ ಸ್ವಮುಖ್ಯಾತ್ ||

ಇತರರನ್ನು ಸ್ತುತಿಸುವುದರಿಂದ ಶಬ್ದಾದಿ ವಿಷಯಗಳನ್ನು ಹೊಂದಲು ಇಚ್ಛಿಸುತ್ತಿರುವ ಮನುಷ್ಯರನ್ನು ನೋಡಿ ಪರಮ ದಯಾಳುಗಳಾದ ಆಳ್ವಾರರು ತಮ್ಮ ದು ಖವನ್ನು ಮರೆತು ಮನುಜರನ್ನು ಕುರಿತು ಶ್ರಿಯ ಪತಿಯನ್ನು ಸ್ತುತಿಸಿ ನಿರತಿಶಯಾನಂದ ಲಕ್ಷಣ ವಿಲಕ್ಷಣವಾದ ಮೋಕ್ಷವನ್ನು ಹೊಂದಿರಿ ಎಂಬುವುದಾಗಿ ಒಂಭತ್ತನೆಯ ತಿರುವಾಯ್ ಮೊಳಿಯಲ್ಲಿ ಹತ್ತು ಪಾಶುರಗಳಲ್ಲಿ ಕೃಪೆಮಾಡಿರುವರು

ಭೂಯೋಽವತೀರ್ಯ ಭುವಿ ದಿವ್ಯವಪು ಸ್ವಕೀಯಂ
ಪ್ರತ್ಯಕ್ಷಯಂತ ಮಖಿಲಾಂಶ್ಚ ಗುಣಾನನನ್ತಮ್ |
ಸ್ತುತ್ವಾ ಮುನಿ ಸ್ವ ಚರಿತಾರ್ಥತಯಾ ನ ಕಿಂಚಿತ್
ದು ಖಂ ಮೇ ಅತಿತರಾಂ ದಶಮೇ ತು ತೋಷ ||

ಪುನ ಸರ್ವೇಶ್ವರನು ಭೂಮಿಯಲ್ಲಿ ಅವತರಿಸಿ ತನ್ನ ದಿವ್ಯಮಂಗಳ ವಿಗ್ರಹವನ್ನೂ ದಿವ್ಯ ಕಲ್ಯಾಣ ಗುಣಗಳನ್ನೂ ತಾವು ಅನುಭವಿಸುವಂತೆ ತಮಗೆ ಕೃಪೆಮಾಡಲು ಅವನ್ನು ಆಳ್ವಾರರು ಚೆನ್ನಾಗಿ ಅನುಭವಿಸಿ ತದನುಭವ ಜನಿತ ಪ್ರೀತಿ ಪ್ರಕರ್ಷದಿಂದ ಆತನನ್ನು ಸ್ತುತಿಸಿದವರಾಗಿ ಸಮಸ್ತ ಭಗವದ್ಗುಣಗಳು ತನಗೆ ಅನುಭವ ವಿಷಯವಾದುದರಿಂದ ತನಗೆ ಯಾವ ದು ಖವೂ ಇಲ್ಲವೆಂದು ಈ ಹತ್ತನೆಯ ತಿರುವಾಯ್ ಮೊಳಿಯಲ್ಲಿ ಬಹಳವಾಗಿ ಸಂತೋಷ ಪಟ್ಟಿದ್ದಾರೆ

ಒರು ನಾಯಕಮ್

ಆದ್ಯೇ ಚತುರ್ಥ ಶತಕೇ ದಶಕೇ ಶಠಾರಿ
ತುಷ್ಟಸ್ತಥಾ ಪರಹಿತಂ ದಯಯಾ ವಿವಕ್ಷನ್ |
ರಾಜ್ಯ ಸ್ವರಾತ್ಮ ಪರಿಭೋಗ ಚಲಾಲ್ಪಭಾವೌ
ಸಮ್ಯಕ್ಪ್ರಸಾಧ್ಯ ಹರಿಮೇವ ಪುಮರ್ಥಮಾಹ ||

ನಾಲ್ಕನೆಯ ಶತಕದ ಮೊದಲನೆಯದಶಕದಲ್ಲಿ ಶಠಗೋಪ ಮುನಿಗಳು ಸಂತೋಷ ಪಟ್ಟವರಾಗಿ ಚೇತನರಲ್ಲಿ ಬಹಳ ದಯೆಯುಳ್ಳವರಾಗಿ ಅವರಿಗೆ ಹಿತವನ್ನು ಉಪದೇಶಿಸುತ್ತಾ ಭಗವದ್ವ್ಯತಿರಿಕ್ತ ಇತರ ಪುರುಷಾರ್ಥಗಳು ಅಸ್ಥಿರಗಳೂ ಅಲ್ಪವೂ ಆಗಿರುವುದರಿಂದ ಅವು ಪುರುಷಾರ್ಥಗಳೇ ಅಲ್ಲವೆಂದು ಶ್ರಿಯ ಪತಿಯೇ ಉತ್ಕೃಷ್ಟನಾದ ಪುರುಷಾರ್ಥವೆಂದು ಅನುಗ್ರಹಿಸಿದ್ದಾರೆ

ಪಾಲನಾಯ್

ತಂ ಪುರುಷಾರ್ಥಮಿತರಾರ್ಥರುಚೇರ್ನಿವೃತ್ತ್ಯಾ
ಸಾಂದ್ರಸ್ಪೃಹಾ ಸಮಯದೇಶವಿದೂರಗಂ ಚ |
ಈಪ್ಸುಶ್ಶುಚಾ ತದನವಾಪ್ತಿ ಭುವಾ--ದ್ವಿತೀಯೇ
ಸ್ತ್ರೀಭಾವನಾಂ ಸಮಧಿಗಮ್ಯ ಮುನೇರ್ಮುಮೋಹ ||

ಇತರ ಪುರುಷಾರ್ಥಗಳಲ್ಲಿನ ಅಭಿರುಚಿಯನ್ನು ಸವಾಸನವಾಗಿ ನಿವೃತ್ತಿಯಾಗಿ ಭಗವದಾಶ್ರಯಣ ರೂಪ ಪುರುಷಾರ್ಥವನ್ನೂ ಹಿಂದಿನ ಕಾಲಗಳಲ್ಲಿ ನಡೆದ ಭಗವದವತಾರ ವ್ಯಾಪಾರಗಳನ್ನು ಈಗಲೇ ಸಾಕ್ಷಾತ್ಕರಿಸಬೇಕೆಂದು ಕೋರಿದವರಾಗಿ ಅವು ಲಭಿಸದೇ ಹೋದುದರಿಂದ ಆಳ್ವಾರರಿಗೆ ಆರ್ತಿಯು ಅಧಿಕವಾಗಿ ಮಹಾಲಕ್ಷ್ಮಿಯ ಭಾವವನ್ನು ಹೊಂದಿ ಈ ದಶಕದಲ್ಲಿ ಮೂರ್ಛೆ ಹೊಂದಿದರು

ಹಸಿರಿದ್ದರೆ ಉಸಿರು
ಹಸಿರಿದ್ದರೆ ಉಣಿಸು
ಹಸಿರಿದ್ದರೆ ನೀರು

**ವೃಕ್ಷೋ ರಕ್ಷತಿ ರಕ್ಷಿತಃ**

ಗಿಡಗಳನ್ನು ಕಾಪಾಡಿರಿ
ಮಾನವ ವರಿಸರವನ್ನು
ಕಾಪಾಡಿದಂತಾಗುತ್ತದೆ

ಕೋವೈ ವಾಯಾಳ್

ಪ್ರೀತ ಪರಂ ಹರಿರಮುಷ್ಯ ತದಾ ಸ್ವಭಾವಾತ್
ಏತನ್ಮನೋ ವಚನ ದೇಹ ಕೃತ ಕ್ರಿಯಾಭಿ |
ಸ್ರಕ್ಚಂದನ ಪ್ರಮುಖ ಸರ್ವವಿಧ ಸ್ವಭೋಗ್ಯ
ಸಂಶ್ಲಿಷ್ಟವಾ ನಿದಮುವಾಚ ಮುನಿಸ್ತೃತೀಯೇ ||

ಭಗವಂತನು ಹಿಂದೆ ಮಾಡಿದ ಲೀಲೆಗಳನ್ನು ಕಾಣದೆ ತಪಿಸಿದ ಆರ್ತರಾದ ಆಳ್ವಾರರ ಸ್ವಭಾವವನ್ನು ಕಂಡ ಸ್ವಾಮಿ ಸಂತೋಷಿತನಾಗಿ ಆಳ್ವಾರರು ತ್ರಿಕರಣಗಳಿಂದ ತಾವು ಮಾಡಿದ ಕೈಂಕರ್ಯಗಳನ್ನೇ ಹೂವಿನಸರ ಗಂಧ ಮತ್ತು ತನ್ನ ಸೌಂದರ್ಯಕ್ಕೆ ಅನುಗುಣವಾದ ಪೀತಾಂಬರವೇ ಮೊದಲಾದ ಭೋಗ್ಯ ವಸ್ತುಗಳಾಗಿ ಅಂಗೀಕರಿಸಿ ತನ್ನೊಡನೆ ಸಂಪೂರ್ಣರಾಗಿ ಸೇರಿದರು ಎಂದು ಈ ತಿರುವಾಯ್ ಮೊಳಿಯಲ್ಲಿ ಆಳ್ವಾರರು ಹೇಳಿದ್ದಾರೆ

ಮಣ್ಣೈಯಿರುನ್ದು

ತೇನ ಪ್ರಹರ್ಷ ಮತಿಮಾತ್ರಭವಂ ಸ್ವಕೀಯಂ
ಸಾತ್ಮ್ಯಂ ವಿಧಾತು ಮಥ ದೂರಗತೇ ಮುಕುಂದೇ |
ಸಂಬಂಧಿನಸ್ಚ ಸದೃಶಾಂಶ್ಚ ವಿಲೋಕ್ಯ ಶೌರೇ
ಭ್ರಾಮ್ಯನ್ಸ್ತಮೇವ ಮುನಿರಾರ್ತಿ ಮಗಾ ಚ್ಚತುರ್ಥೇ ||

ತನ್ನ ಪ್ರಣಯಿತ್ವ ಗುಣವನ್ನು ಅನುಭವಿಸುತ್ತಿರುವ ಆಳ್ವಾರರಿಗೆ ಹರ್ಷವು ಮಿತಿಮೀರಿ ಹೋಗುತ್ತಿರುವುದನ್ನು ನೋಡಿ ಸರ್ವೇಶ್ವರನು ಇದು ಅವರನ್ನು ನಶಿಸುವುದೆಂದು ಬಗೆದು ಅದನ್ನು ಸಂಕೋಚ ಪಡಿಸಲು ತಾನು ಆಳ್ವಾರರಿದ ದೂರವಾದನು ಹೀಗೆ ತನ್ನಿಂದ ದೂರವಾದವನ ವಿಶ್ಲೇಷವನ್ನು ಸಹಿಸದೇ ಅತ್ಯಧಿಕವಾಗಿ ದು ಖಿತರಾದ ಆಳ್ವಾರರು ಭಗವಂತನಿಗೆ ಆಕಾರಾದಿಗಳಿಂದ ಸಮಾನವಾಗಿರುವ ಆಕಾರ, ಸಮುದ್ರ, ಸೂರ್ಯ, ಚಂದ್ರ, ಅಗ್ನಿ, ಗಾಳಿ, ಸನ್ಯಾಸಿಗಳು, ನೀಲವಾದ ಮೇಘ ಇವುಗಳನ್ನೂ ಪರಿಮಳ ಪ್ರಚುರವಾದ ತುಲಸೀಮಾಲೆ ಭೂಮಿ, ಸುಕುಮಾರವಾದ ಹಸುವಿನ ಕರುಗಳೂ, ಇಂತಹ ಸಂಬಂಧ ಪದಾರ್ಥಗಳನ್ನು ನೋಡಿ ಸರ್ವೇಶ್ವರನೆಂದು ಭ್ರಮಿಸಿದಂತೆ ತನಗೆ ಹುಟ್ಟಿದ ಆರ್ತ್ಯತಿಶಯವನ್ನು ಈ ನಾಲ್ಕನೆಯ ದಶಕದಲ್ಲಿ ಹೇಳಿದರು

ವೀತ್ತಿರುಂದು

ಆನಂದ--ನಿರ್ಭರ--ಮದೀನ ವಿಭೂತಿಯುಕ್ತಂ
ವೈಕುಂಠನಾಥ ಮಥವೀಕ್ಷ್ಯ ಮುನಿಸ್ತ್ವಪೂರ್ವ ಸ |
ನಾನ್ಯ ಸ್ಯಮೋಸ್ತಿ ಮಮ ನಾ ಪ್ಯನವಾಪ್ಯ ಮದ್ಯೇತಿ
ಆನಂದಪೂರ ಮಥಿ ಪಂಚಮ ಮಾಸಸಾದ ||

ತನ್ನ ವಿಶ್ಲೇಷವನ್ನು ಸಹಿಸದೇ ಬಾಧೆಪಡುತ್ತಿರುವ ಆಳ್ವಾರರಿಗೆ ಸರ್ವೇಶ್ವರನು ಉಭಯವಿಭೂತಿಯುಕ್ತನಾಗಿ ತನ್ನಲ್ಲೊಂದೂ ಕೊರತೆ ಇಲ್ಲದಂತೆ ತನ್ನ ದರ್ಶನವನ್ನು ಕೃಪೆಮಾಡಲು ಆಳ್ವಾರರು ಭಗವಂತನನ್ನು ಕಂಡು ವಿಶೇಷವಾಗಿ ಸ್ತೋತ್ರಮಾಡಲು, ಇಹ ಪರದಲ್ಲಿ ತನಗೆ ಸಮಾನರಾದವರು ಬೇರೊಬ್ಬರು ಯಾರೂ ಇಲ್ಲವೆಂದೂ ತನಗೆ ಲಭಿಸದೇ ಕಾದ ವಸ್ತು ಲಭ್ಯವಾಯಿತೆಂದು ಆನಂದಾತಿಶಯದಿಂದ ಈ ಐದನೆಯ ದಶಕದಲ್ಲಿ ಕೊಂಡಾಡಿದ್ದಾರೆ

ತೀರ್‌ಪ್ಪಾರೈ

ಸ್ವಪ್ನೋಪಮಾದನುಭವಾದಮುತೋಪ್ಯಲಬ್ಧ
ಸ್ವಾಪೇಕ್ಷಿತೇ ಶರಜಿತವ್ಯಸನಾದ್ವಿಸಂಜ್ಞೇ |
ಯೇ ಕ್ಷುದ್ರ ದೇವ ಮುಖತ ಪರಿಹರ್ತುಕಾಮಾ
ತೇ ವಾರಿತಾ ಸ್ತದುಚಿತಜ್ಞ ಗಿರೇವ ಷಷ್ಠೇ ||

ಆಳ್ವಾರರಿಗೆ ಹುಟ್ಟಿದ ಈ ಭಗವದನುಭವವು ಮಾನಸಾನುಭವವಾದುದರಿಂದ ಸ್ವಪ್ನಕ್ಕೆ ಸಮಾನವಾಯ್ತು ಬಾಹ್ಯ ಸಂಶ್ಲೇಷವು ದುರ್ಲಭವಾಯಿತು ತಮ್ಮ ಅಪೇಕ್ಷೆ ಕೈಗೂಡದೆ ಹೋದದ್ದರಿದ ಅವರು ಮೂರ್ಛಿತರಾದರು ಇವರ ಬಂಧುಗಳು ಇವು ಕ್ಷುದ್ರದೇವತೆಗಳ ಪ್ರಭಾವವೆಂದು ಪರಿಹರಿಸಲು ಅಪೇಕ್ಷೆ ಪಟ್ಟಾಗ ಆಳ್ವಾರರ ಮನೋಗತವನ್ನು ಕಂಡ ಸ್ನೇಹಿತಳು ನಿಜವಾದ ವಿಷಯವನ್ನು ಈ ಆರನೆಯ ದಶಕದಲ್ಲಿ ತಿಳಿಸಿರುತ್ತಾಳೆ -- ಭಗವನ್ನಾಮ ಸಂಕೀರ್ತನೆ ಭಕ್ತರ ಪಾದದೂಳಿ ಈ ವ್ಯಾದಿಗೆ ಪರಿಹಾರವೆಂದು

ಶೀಲ ಮಿಲ್ಲಾ

ತದ್ವೇಷಜಾತ್ ಹರಿನಾಮ--ಕಥಾ ಪ್ರಸಂಗಾತ್
ಸಂಜ್ಞಾಮುಪೇತ್ಯ ಮುನಿರುದ್ಭಟ ದು ಖಬೋಧ |
ಆಪತ್ಸಖತ್ವ--ಮುಖವಾಚಕ ಸ್ತಮುಚ್ಚೈ
ಆಕ್ರುಶ್ಯ ವಾಂಛಿತ ಮಯಾಚತ ಸಪ್ತಮೇನ ||

ಆ ವಿಶ್ಲೇಷಕ್ಕೆ ಔಷಧವಾದ ಹರಿನಾಮ ಸಂಕೀರ್ತನಗಳನ್ನು ಮಾಡಿದ ಮೇಲೆ ಮೋಹದಿಂದ ಎಚ್ಚೆತ್ತು ಜ್ಞಾನ ಹೊಂದಲು ಹೀಗೆ ಹೊಂದಿದ ಜ್ಞಾನವು ಭಗವದನುಭವವನ್ನು ಹುಟ್ಟಿಸದೇ ಹೋದದ್ದರಿಂದ ಶೋಕಾತಿರೇಕದಿಂದ ಆ ಭಗವಂತನ ಅಪತ್ಸಖತ್ವವು ವಿಶ್ಲೇಷದಲ್ಲಿ ಸಹಿಸಲಾರದ ಸೌಂದರ್ಯವು ಆಪತ್ತಿಗೆ ಕಾರಣವನ್ನು ತಿಳಿದು ಪರಿಹರಿಸಲು ತಕ್ಕ ಶಕ್ತಿ ಇವೇ ಮೊದಲಾದ ದಿವ್ಯ ಕಲ್ಯಾಣ ಗುಣಗಳಿಗೆ ವಾಚಕ--ವಾಕ್ಯಗಳಿಂದ ಗಟ್ಟಿಯಾಗಿ ಮೊರೆಯಿಟ್ಟು ಭಗವಂತನಿಗೆ ತಮ್ಮ ಅಭೀಷ್ಟವನ್ನು ಈ ಏಳನೆಯ ದಶಕದಲ್ಲಿ ಹೇಳಿರುತ್ತಾರೆ

ಏರಾಳುಮ್

ಏವಂ ರುದನ್ನಪಿ ಶರಾರಿ ಅಲಬ್ಧಕಾಮ
ಸ್ವೋಪೇಕ್ಷಣೈಕ ಪರತಾಮವಧಾರ್ಯ ಶೌರೇ |
ತಚ್ಛೇಷತಾದಿ ರಹಿತೇ ಸಕಲೇ ಸ್ವಕೀಯೇ
ಸ್ವಸ್ಮಿನ್ನಪಿ ಸ್ಪುರಿತ ನಿಸ್ಪೃಹತೋಽಷ್ಟಮೇಽಭೂತ್ ||

ನೋಡಿದವರೆಲ್ಲರೂ ದ್ರವೀಭೂತರಾಗುವಂತೆ, ಆಳ್ವಾರರು ಶೋಕಪಡುತ್ತಿದ್ದರೂ ತಮ್ಮ ಅಪೇಕ್ಷೆಯಾದ ಬಾಹ್ಯ ಅನುಭವವನ್ನು ಹೊಂದದವರಾಗಿ ತಮ್ಮ ಇಷ್ಟವು ಸಾಫಲ್ಯವನ್ನು ಹೊಂದದೆ ಹೋಗಲು ಕಾರಣವು ಭಗವಂತನ ಉಪೇಕ್ಷೆಯೇ ಎಂಬುವುದಾಗಿ ನಿಶ್ಚಯಿಸಿ ಹೀಗೆ ಶ್ರಿಯಃಪ

ತಿಯು ಅಪೇಕ್ಷಿಸಿದ ಆತ್ಮೀಯಗಳಾದ ಸೌಂದರ್ಯವು ಮನಸ್ಸು ಸ್ತ್ರೀತ್ವವು, ಲಾವಣ್ಯವು, ಜ್ಞಾನವೂ ಸಮುದಾಯಶೋಭೆ ಆಭರಣಗಳೂ ಶರೀರವೂ ಇವುಗಳಲ್ಲೂ ತನ್ನಲ್ಲೂ ನಿಸ್ಪೃಹರಾದರೆಂದು 8ನೆ ದಶಕ ಹೇಳುತ್ತೆ

### ನಣ್ಣಾದಾರ್

ಶೋಚನ್ ಮುನಿಸ್ವಸದೃಶಂ ಚ ಸಹಾಯ ಮಿಚ್ಛನ್
ಲೋಕಂ ವಿಲೋಕ್ಯ ವಿಪರೀತ ರುಚಿಂ ವಿಷಣ್ಣ |
ಅತ್ರತ್ಯ ವಾಸಮಸಹರ್ಷ ಹರಿಣಾ ಸ್ವವಾಸಂ
ವೈಕುಂಠಕಂ ಪ್ರಕಟಿತ ನ್ನವಮೇ ದದರ್ಶ ||

ಶೋಕಿಸುತ್ತಿರುವ ನಮ್ಮಾಳ್ವಾರರು ತನಗೆ ಸಮಾನವಾದ ಸಹಾಯವನ್ನು ಇಚ್ಛಿಸುತ್ತಿರುವರಾಗಿ ಜನರನ್ನು ವಿಪರೀತವಾದ ವಿಷಯಾಂತಗಳ್ಲಿ ರುಚಿವುಳ್ಳವರಾಗಿರುವುದನ್ನು ನೋಡಿ ದು ಖಿತರಾಗಿ ಈ ಸಂಸಾರದಲ್ಲಿರುವವರೊಡನೆ ವಾಸಮಾಡುವುದನ್ನು ಸಹಿಸದವರಾಗಿ ವಿಷ್ಣುವಿನಿಂದ ಕೂಡಿದ ತನ್ನ ದಿವ್ಯ ವಿಭೂತಿಯನ್ನು ಭಗವಂತನು ಇವರಿಗೆ ತೋರಿಸಲು ತಾವು ಈ ಒಂಬತ್ತನೆಯ ದಶಕದಲ್ಲಿ ಅದನ್ನು ಸಾಕ್ಷಾತ್ಕರಿಸಿದರು

### ಒನ್ನುನ್ದೇವುಂ

ಬಂಧೇ ಸಮೇಪಿ ಹರಿಣಾ ನಿಖಿಲಾತ್ಮರಾಶೇ
ಸಂಸಾರಹೇತು ಮಿತರೇಷು ಪರತ್ವಬೋಧಂ |
ವೇದೇತಿಹಾಸ ಮುಖತ ಪರಿಹೃತ್ಯ ಶೌರೇ
ಅರ್ಚಾತನೋಸ್ಸ ದಶಮೇ ವ್ಯವೃಣೋತ್ ಪರತ್ವಂ ||

ಸಕಲ ಚೇತನರಿಗೂ ಸರ್ವೇಶ್ವರನೊಡನೆ ಶೇಷ ಶೇಷೀಭಾವ ಸಂಬಂಧವು ಸಮಾನವಾಗಿರಲು ಅವರು ಉಜ್ಜೀವಿಸದೇ ಸಂಸಾರ ಬಂಧನಕ್ಕೆ ಕಾರಣವಾದ ಬೇರೆ ಕ್ಷುದ್ರ ದೇವತೆಗಳಲ್ಲಿ ಪರತ್ವ ಜ್ಞಾನವೇ ಕಾರಣವೆಂದು ಆಲೋಚಿಸಿ, ಶ್ರುತಿ ಸ್ಮೃತಿ ಇತಿಹಾಸ ಪುರಾಣಗಳ ಪ್ರಭಾವದಿಂದ ಅವರಿಗಿರುವ ಭಗವದ್ವಿಷಯ ಪ್ರರತ್ವ ಜ್ಞಾನವನ್ನು ಪರಿಹರಿಸಿ ಅರ್ಚಾರೂಪದಿಂದ ಕುರುಕೂರೆಂಬ ದಿವ್ಯಕ್ಷೇತ್ರದಲ್ಲಿ ಸರ್ವಸುಲಭನಾಗಿ ದಯಮಾಡಿಸಿರುವ ಶ್ರಿಯ ಪತಿಗೆ ಪರತ್ವವನ್ನು ಈ ನಾಲ್ಕನೆಯ ಶತಕದ ಹತ್ತನೆಯ ದಶಕದ ತಿರುವಾಯ್ ಮೊಳಿಯಲ್ಲಿ ವಿಶದವಾಗಿ ಹೇಳಿದರು

(ಸಶೇಷ)



ಶಿವಧನುರ್ಭಂಗ

# ವಾರ್ತಾಲಹರಿ

## ಕರ್ನಾಟಕದಲ್ಲಿ

### ಚನ್ನಪಟ್ಟಣದಲ್ಲಿ ಪುರಂದರ ಆರಾದನೆ

ಅಖಿಲಬಾರತ ಹರಿದಾಸ ಸಾಹಿತ್ಯಸಮ್ಮೇಳನ ಸಮಿತಿ ಹಾಗೂ ತಿ ತಿ ದೇ ದಾಸಸಾಹಿತ್ಯ ಪ್ರಾಜೆಕ್ಟ್ ಸಂಯುಕ್ತ ಆಶ್ರಯದಲ್ಲಿ ಚನ್ನಪಟ್ಟಣದ ಕೋಟೆ ಕಾಳಮ್ಮನ ಗುಡಿ ಬೀದಿಯಲ್ಲಿನ ಶ್ರೀ ತಿಟ್ಟ ಮಾರನಹಳ್ಳಿ ವೆಂಕಟೇಗೌಡರ ಕಲ್ಯಾಣ ಮಂಟಪದಲ್ಲಿ ದಿನಾಂಕ 1-2--92 ರಿಂದ 5--2--92 ರ ವರೆಗೆ ಅಖಿಲಬಾರತ ಹರಿದಾಸ ಸಮ್ಮೇಳನ ಹಾಗೂ ಪುರಂದರ ದಾಸರ ಆರಾದನಾ ಮಹೋತ್ಸವ ಯಶಸ್ವಿಯಾಗಿ ನಡೆದವು

1--2--92 ರಂದು ಶ್ರೀ ಬಿ ವಿ ಎನ್ ಸುಬ್ರಹ್ಮಣ್ಯಂ ಅವರಿಂದ ಪತಾಕಾವಿಷ್ಕರಣವಾಗಿ, ತಿರುಪತಿ ತಿಮ್ಮಪ್ಪನ ಊರ ಮೆರವಣಿಗೆ ಬವ್ಯವಾಗಿ ನಡೆಯಿತು ಅನಂತಪುರ, ಮಂಡ್ಯ, ಚನ್ನಪಟ್ಟಣಗಳ ಬಜನ ಮಂಡಳಿಗಳ ಸಾಮೂಹಿಕ ಬಜನೆಯ ನಡುವೆ ಸಾಲಂಕೃತ ತಿರುಪತಿ ತಿಮ್ಮಪ್ಪ ಪುರ ಬೀದಿಗಳಲ್ಲಿ ಬಿಜಯ ಮಾಡಿದಾಗ ರಸ್ತೆಯ ಇಕ್ಕೆಲಗಳಲ್ಲೂ ಜನಬಕ್ತಿಯಿಂದ ನಿಂತು ಸ್ವಾಮಿಯನ್ನು ಸ್ವಾಗತಿಸಿದರು ಹರಿದಾಸ ದರ್ಶಿನಿ ಯಾದ ದಾಸಸಾಹಿತ್ಯ ವಸ್ತು ಪ್ರದರ್ಶನವನ್ನು ಪಲಿಮಾರು -- ಬಂಡಾರಕೇರಿ ಮಠಾದೀಶರಾದ ಶ್ರೀ ಶ್ರೀ ವಿದ್ಯಾಮಾನ್ಯತೀರ್ದ ಶ್ರೀಪಾದರು ಉದ್ಘಾಟಿಸಿದರು

ಶ್ರೀ ಶ್ರೀ ವಿದ್ಯಾಮಾನ್ಯತೀರ್ದರೂ, ವ್ಯಾಸರಾಜಮಠದ ಶ್ರೀ ಶ್ರೀ ಲಕ್ಷ್ಮೀಂದ್ರತೀರ್ದರೂ ಸಮ್ಮೇಳನದ ಐದೂ ದಿನಗಳೂ ಹಾಜರಿದ್ದು ದಿನವೂ ಸಂಜೆಗಳಲ್ಲಿ ಆಶೀರ್ವಚನಗಳನ್ನು ನೀಡಿದರು

ಮಂಡ್ಯದ ಶ್ರೀ ಕೆ ಎಸ್ ಶ್ರೀನಿವಾಸ ರಾಯರು ಮಹಾಬಾರತದ ಪಾತ್ರ ವೈಶಿಷ್ಟ್ಯವನ್ನು ಕುರಿತೂ, ಶ್ರೀ ದೂಳಖೇಡ ನಾರಾಯಣಾಚಾರ್ಯರು ಹರಿಕದಾಮೃತಸಾರದ ನಾಮಸ್ಮರಣ ಸಂದಿಯನ್ನು ಕುರಿತೂ ಮಾತನಾಡಿದರು ಶ್ರೀ ಪಿ ಎಸ್ ಶೇಷಗಿರಿರಾಯರು ಹರಿಕದಾಮೃತಸಾರದ ಕರುಣಾಸಂದಿಯನ್ನು ವಿವರಿಸಿದರು ದಾಸಸಾಹಿತ್ಯ ಪ್ರಾಜೆಕ್ಟ್ ವಿಶೇಷಾದಿಕಾರಿ ಶ್ರೀ ಕೆ ಅಪ್ಪಣ್ಣಾಚಾರ್ಯರು 'ಹರಿದಾಸರು ಕಂಡಂತ ಗುರುರಾಜರು' ಬಗ್ಗೆ ವಿವರಿಸಿದರು ಶ್ರೀ ಪುಷ್ಕರ ಪ್ರಸಾದರು ಪುರಂದರೋಪನಿಷತ್ತನ್ನೂ, ಶ್ರೀ ನರಹರಿ ವಿಠಲದಾಸರು ದಾಸಸಾಹಿತ್ಯದ ಹಿರಿಮೆಯನ್ನು ಹೇಳಿದರು

ಕೌತಾಳದ ಶ್ರೀ ಗುರುಜಗನ್ನಾದ ದಾಸ ಸೇವಾ ಸಮಿತಿಯಿಂದ ಹರಿದಾಸರ ಹಾಡುಗಳ ಶ್ರೀನಿವಾಸ ಕಲ್ಯಾಣ ನಿರೂಪಿತವಾಯಿತು ಶ್ರೀರಂಗಂನ ಕೋವಿಲಾಡಿ ರಂಗರಾಜನ್ ಸಂಗೀತಸಬೆ ರಂಜಿಸಿತು ಶಿವಮೊಗ್ಗ ಶ್ರೀನಿವಾಸದಾಸರು ಹರಿಕತೆ ಮಾಡಿ ಹರಿ ಪದಾರ್ಚನಾಸಂಗೀತದಿಂದ ಶ್ರೋತೃಗಳನ್ನು ಸೆಳೆದರು

ದಾಸಸಾಹಿತ್ಯ ವಸ್ತು ಪ್ರದರ್ಶನವನ್ನು ದಿನವೂ ಬೆಳಗ್ಗೆ ಸಂಜೆಗಳಲ್ಲಿ ಸಾರ್ವಜನಿಕರಿಗಾಗಿ ತೆರೆಯಲಾಗಿದ್ದಿತು ಅಸಂಖ್ಯಾತರು ಕುತೂಹಲ ಬಕ್ತಿಗಳಿಂದ ಪ್ರದರ್ಶನವನ್ನು ವೀಕ್ಷಿಸಿದರು ತದಂಗವಾಗಿ ತಿ ತಿ ದೇ ದಾರ್ಮಿಕ ಗ್ರಂದಗಳ ಪ್ರದರ್ಶನ ವಿಶೇಷ ರಿಯಾಯಿತಿ ದರಗಳಲ್ಲಿ ವಿಕ್ರಯವೂ ಏರ್ಪಾಡಾಗಿದ್ದು ಜನ ಆಸಕ್ತಿಯಿಂದ ಪುಸ್ತಕಗಳನ್ನು ಕೊಳ್ಳಲು ಮುಂದ ಒರುತ್ತಿದ್ದುದು ಕಂಡುಬಂದಿತು

### ಶ್ರೀ ಗುರುರಾಜರ ಪಟ್ಟಾಬಿಷೇಕ ಮಹೋತ್ಸವ

ಲಕ್ಷ್ಮೇಶ್ವರದ ಮಂತ್ರಾಲಯ ಪಾದಯಾತ್ರಾ ಸಂಘ ಹಾಗೂ ತಿ ತಿ ದೇ ದಾಸಸಾಹಿತ್ಯ ಪ್ರಾಜೆಕ್ಟ್ ಸಂಯುಕ್ತ ಆಶ್ರಯದಲ್ಲಿ ವಾರವಾಡದ ಮಾಳಮಡ್ಡಿಯ ವನವಾಸಿ ರಾಮಮಂದಿರದಲ್ಲಿ ಮಾರ್ಚ್ 5, 6, 7 ರಂದು ಶ್ರೀ ರಾಘವೇಂದ್ರ ಗುರುಸಾರ್ವಬೌಮರ ಪಟ್ಟಾಬಿಷೇಕ ಮಹೋತ್ಸವವು ಉತ್ಸಾಹ ಸಂಬ್ರಮಗಳಿಂದ ನಡೆದು ಯಶಸ್ವಿಯಾಯಿತು

ದಿನಾಂಕ 5 3- 92 ರ ಬೆಳಗ್ಗ ವಿಶೇಷ ಅಲಂಕರಣಗೊಂಡ ರಥದಲ್ಲಿ ತಿರುಪತಿ ತಮ್ಮಪ್ಪನ ಮೆರವಣಿಗ ಜೊತಯಲ್ಲಿಯೇ ನಾಲ್ಕು ಆನಗಳ ಮೇಲ ಆನಂದ ತೀರ್ದರು, ವಾದಿರಾಜರು, ಜಯತೀರ್ದರು, ರಾಘವೇಂದ್ರ ಸ್ವಾಮಿಗಳ ಚಿತ್ರಪಟಗಳು ಯತಿ ಚತುಷ್ಟಯದ ನಡುವ ತಿಮ್ಮಪ್ಪ ಸಕಲವಾದ್ಯವೈಬವ, ವೇದ ಘೋಷದಲ್ಲಿ ಕೌತಾಳದ ಗುರುಜಗನ್ನಾದ ಬಜನ ಮಂಡಳಿ, ಕುಷ್ಟಗಿಯ ಗುರುರಾಜ ಬಜನ ಮಂಡಳಿಗಳ ಸಾಮೂಹಿಕ ಬಜನೆ

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಎಂ ವಿ ಎಸ್ ಪ್ರಸಾದ್ ಐ ಎ ಎಸ್,
ಕಾರ್ಯನಿರ್ವಹಣಾಧಿಕಾರಿ

ಪ್ರಿಯ ಭಕ್ತ ಬಂಧುಗಳೆ

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ ವೇದಕಾಲ ದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ ಆಹಾರವನ್ನು ನೀಡಿದವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ ೧೯೮೫ ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ ಭಾರತಾ ದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ ಸಾರ್ವಜನಿಕರ ಶ್ಲಾಘನೆಗೆ ಪಾತ್ರ ವಾಗಿದೆ ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ

ನಿತ್ಯ ಅನ್ನದಾನಯೋಜನೆಯಲ್ಲಿ ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿ ಗೆಯನ್ನು ಸಲ್ಲಿಸುವುದರ ಮೂಲಕ ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ ತಿ ದೇವಸ್ಥಾನಗಳು ಈಚೆಗೆ ನಿರ್ಧರಿ ಸಿದೆ ತಾವು ರೂ ೧೦೦೦೦ ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು, ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂ ಪರೆಯಾದ ಅನ್ನದಾನಯೋಜನೆಯನ್ನು ತಿ ತಿ ದೇ ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ

ದೂರದೂರಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿ

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ, ಅನ್ನದಾನ ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ ಹಾಗಾಗಿ ಅನ್ನದಾನ ಮಾಡ ಬೇಕು

ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ ತಮ್ಮ ವಿಶ್ವಾಸಿ
**(ಎಂ ವಿ ಎಸ್ ಪ್ರಸಾದ್)**

ಗಳ ನಡುವೆ ದಾರವಾಡದ ಬಕ್ತರನ್ನು ಆಶೀರ್ವದಿ ಸಲು ಸಾಗಿದ ದೂರ 14 ಕಿ ಮೀ ಇಡೀ ಹದಿ ನಾಲ್ಕು ಕಿಲೋ ಮೀಟರಿನ ಮೆರವಣಿಗೆಯಲ್ಲಿ ಜನ ಉತ್ಸಾಹ ಸಂಭ್ರಮಗಳಿಂದ ಸ್ವಾಮಿಯನ್ನೂ ಯತಿ ಚತುಷ್ಟಯವನ್ನೂ ತಮ್ಮ ತಮ್ಮ ಮನೆಯ ಮುಂಬಾ ಗವನ್ನು ಸಾರಿಸಿ ರಂಗವಲ್ಲಿಯಿಟ್ಟು ಸ್ವಾಗತಿಸಿದರು

ದಾಸಸಾಹಿತ್ಯದ ವಸ್ತು ಪ್ರದರ್ಶನವನ್ನು ಶ್ರೀ ಶ್ರೀ ವಿಶ್ವೇಶತೀರ್ದ ಶ್ರೀಪಾದಂಗಳು (ಪೇಜಾ ವರಮಠ) ಉದ್ಘಾಟಿಸಿ ಆಶೀರ್ವಚನ ನೀಡಿದರು ಮೆರವಣಿಗೆಯನ್ನು ಆರಂಬಿಸಿದವರು ದಾರವಾಡ ನಗರಾಬಿವೃದ್ಧಿ ಪ್ರಾಧಿಕಾರದ ಅದ್ಯಕ್ಷ ಶ್ರೀ ಪಿ ಎಸ್ ಶೂರ್ಪಾಲಿ, ತಿ ತಿ ದೇ ಪೌರಸಂಬಂ ದಾದಿಕಾರಿ ಡಾ|| ರಾವುಲ ಸೂರ್ಯನಾರಾಯಣ ಮೂರ್ತಿ ಅವರು ಮುಖ್ಯ ಅತಿದಿಗಳಾಗಿ ಬಾಗವಹಿ ಸಿದ್ದರು ಅಂದು ಸಂಜೆ ಸಾಗರದ ಬಾಲಹರಿದಾಸ ಶ್ರೀ ಯೋಗೀಶ ವಿಠಲರ ಹರಿಕದೆ ನಡೆಯಿತು

ದಿನವೂ ಉಪನ್ಯಾಸ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ಶ್ರೀ ಅರಳು ಮಲ್ಲಿಗೆ ಪಾರ್ದ ಸಾರದಿ, ಶ್ರೀ ಪುಷ್ಕರ ಪ್ರಸಾದ್, ಶ್ರೀ ಕೃಷ್ಣಾಚಾರ್ಯ ಪಚ್ಛಾಪುರ, ಶ್ರೀ ಕೆ ಅಪ್ಪಣ್ಣಾಚಾರ್ಯ (ದಾಸಸಾಹಿತ್ಯ ಪ್ರಾಜೆಕ್ಟ್) ಬಕ್ತಿ, ಸಿದ್ಧಾಂತ ಪರ ಉಪನ್ಯಾಸಗಳನ್ನು ನೀಡಿದರು

ಶ್ರೀ ಪುತ್ತೂರು ನರಸಿಂಪ ನಾಯಕರು, ಶ್ರೀಮತಿ ಜಯಶ್ರೀ ಗುತ್ತಲ ಅವರುಗಳ ಸಂಗೀತ ಸಬೆಗಳು ರಂಜಿಸಿದವು.

ಮಂತ್ರಾಲಯದ ಅರ್ಚಕ ಶ್ರೀ ವೆಂಕಣ್ಣಾ ಚಾರ್ಯರು, ಹಾಗೂ ಶ್ರೀ ವಾದೀಂದ್ರಾಚಾರ್ಯರು ಶ್ರೀ ರಾಘವೇಂದ್ರ ಗುರುಸ್ತೋತ್ರವನ್ನು ಮಾಡಿದರು

ಹರಿದಾಸ ಸಾಹಿತ್ಯ ಪ್ರದರ್ಶಿನಿಯಲ್ಲಿ ನೂರಾರು ಛಾಯಾಚಿತ್ರಗಳೂ, ತೈಲವರ್ಣ ಚಿತ್ರ ಗಳೂ, ಸೃಷ್ಟಿಪ್ರಕರಣ, ದೇಹಗತ ಕಮಲ, ವಿಶ್ವ ಪುರುಷ, ಕೇಶವಾದಿ ರೂಪಗಳು, ಇದ್ದು ಸಾರ್ವ ಜನಿಕರು ಇವುಗಳನ್ನು ಆಸಕ್ತಿಯಿಂದಲೂ ಬಕ್ತಿ ಯಿಂದಲೂ ವೀಕ್ಷಿಸುತ್ತಿದ್ದುದು ಕಂಡುಬಂದಿತು ತಿ ತಿ ದೇ ಗಳ ದಾರ್ಮಿಕ ಪುಸ್ತಕಗಳನ್ನು, ಕ್ಯಾಸೆ ಟ್‌ಗಳನ್ನು, ಶ್ರೀನಿವಾಸ ಬ್ರಹ್ಮೋತ್ಸವ ವೈಬವದ ಚಲನ ಚಿತ್ರ ಮುದ್ರಿಕೆಯನ್ನು, ಜನ ಉತ್ಸಾಹದಿಂದ ರಿಯಾ ಯಿತಿ ದರಗಳಲ್ಲಿ ಕೊಂಡುಕೊಳ್ಳುತ್ತಿದ್ದುದು ಕಂಡು ಬಂದಿತು



ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ ಹಿರಿಮೆ ಪರಂಪರೆ ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ

ತಿರುಮಲೆಯ ಸಾವಿರ ಕಂಬದ ಸಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು ಮಾನವ ಶಾಸ್ತ್ರ ಪ್ರಾಕ್ ವಸ್ತುಗಳನ್ನೂ ನೆಲ ನಾಣ್ಯಗಳ ಬಗೆಗಳನ್ನೂ ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ ಇಲ್ಲಿ ಅಪರೂಪದ ಮರದ ಕೆತ್ತನೆಗಳೂ ಶಿಲ್ಪಗಳೂ ಲೋಹ ವಿಗ್ರಹಗಳೂ ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ ತಿ ತಿ ದೇ ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್ ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿ ನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ ಇದರ ಹಲವು ವಿಭಾಗಗಳೆಂದರೆ

ವೈಷ್ಣವತೆಯ ಉಗಮ ವಿಕಾಸ ವಾಸುದೇವ ವೃಷ್ಣಿಕುಂಜ ನಿಂದ ಆರಂಭವಾದ ಈ ವೈಷ್ಣವ ಧರ್ಮ ಇಂದು ಇನ್ನೂರಕ್ಕೂ ಮಿಗಿಲಾಗಿ ಉಪಶಾಖೆಗಳಾಗಿ ಭಾರತದಲ್ಲೆಲ್ಲ ಹರಡಿದೆ ದಕ್ಷಿಣ ಭಾರತದಲ್ಲಿನ ವೈಷ್ಣವ ಧರ್ಮ ವೈಖಾನಸ ಹಾಗೂ ಪಾಂಚರಾತ್ರಾಗಮಗಳಿಂದ ವಿಶೇಷ ಪ್ರಭಾವಿತವಾದದ್ದನ್ನು ಶಿಲ್ಪಗಳ ಚಿತ್ರಗಳನ್ನು ತೋರಿಸಿ ಅವುಗಳ ಬಹಿರಂಗ ಅರ್ಥವನ್ನೂ ಗೂಢಾರ್ಥವನ್ನೂ ವಿವರಿಸಲಾಗಿದೆ ಈ ವಿಭಾಗದಲ್ಲಿ ೧೦ನೇ ಶತಮಾನದ ವಿಶಿಷ್ಟ ವಿಗ್ರಹಗಳಿದ್ದು ಅವುಗಳನ್ನು ನಾಗುಲಾಪುರಂ ದೇವಾಲಯದಿಂದ ಸಂಗ್ರಹಿಸಲಾಗಿದೆ

ವಾಸ್ತುಶಾಸ್ತ್ರ ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ ಭೂಶುದ್ಧಿ ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ

ಶಿಲ್ಪಶಾಸ್ತ್ರ ಈ ವಿಭಾಗದಲ್ಲಿ ವಿಗ್ರಹಗಳ ಉದ್ಭವತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ

ವಿಗ್ರಹಗಳು ವಿಷ್ಣುವಿನ ಹಲವಾರು ರೂಪಗಳ ಭಂಗಿಗಳೂ ಆಭರಣಗಳೂ ವ್ಯಾವೃತವಾಗಿವೆ

ಆಳ್ವಾರ್‌ಗಳು ವಿಶಿಷ್ಟಾದ್ವೈತ ತತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವಾರರ ಸಂದೇಶಗಳೇ ಆಧಾರ ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು

ಸಮಯಾಚಾರಗಳು ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾಯುವವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ

ಕಲೆ ಹರಿದಾಸರ ಹಿರಿಮೆಯನ್ನೂ ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ ವಿಷ್ಣು ಶಕ್ತಿ ಷಣ್ಮುಖ ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ

**ಪರಂಪರೆಯ ಪರಿಚಯ ಹೊಂದಿರಿ ಒಮ್ಮೆ ಭೇಟಿ ನೀಡಿರಿ**

---

**ಕಾಲ ಬೆಳಗ್ಗೆ ೮ ರಿಂದ**
**ರಾತ್ರಿ ೮**

**ಟಿಕೆಟ್ ರೂ ೧-೦೦ (ಹಿರಿಯರಿಗೆ)**
**" " ೦-೫೦ (ಕಿರಿಯರಿಗೆ)**

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಜೂನ್ 1992

**ಹುಲಗನ ಮರಡಿ**

- ಬಿ ಕೆ ಪುಷ್ಪಲತಾಮೂರ್ತಿ

**ನಾಲಾಯಿರ ದಿವ್ಯ ಪ್ರಬಂಧ**

- ಪ್ರೊ|| ಹಾರೋಹಳ್ಳಿ ಪುಟ್ಟಸ್ವಾಮಿ

**ದೇವತೆಗಳ ವಾಹನಗಳು**

--ರಮಸುತ

**ತುಳಸಿ**

-ಪದ್ಮಮ್ಮ

**ಕೈವಾರದ ಕವಿಪ್ರತಿಬೆ**

--ಬ ನ ಗುಂಡೂರಾವ್

**ಜೊತೆಗೆ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ** ಬೆಲೆ ರೂ 1-00 ಮಾತ್ರ

ವಿಶೇಷ ಸೂಚನೆ ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ ವಾರ್ಷಿಕ ಚಂದಾ ರೂ 12-00 ಮಾತ್ರ ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು ಸಂಪಾದಕರು,
ತಿ ತಿ ದೇ ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಜೂನ್ --- 1992

| | |
|---|---|
| 3 ಬುದವಾರ | ನಮ್ಮಾಳ್ವಾರ್ ಉತ್ಸವಾರಂಬ |
| 4 ಗುರುವಾರ | ಶ್ರೀ ಗೋವಿಂದ ರಾಜಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣೆ |
| 10 ಬುದವಾರ | ಅಪ್ಪಲಾಯಗುಂಟ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವದ ಅಂಕುರಾರ್ಪಣೆ |
| | ತಿರುಚಾನೂರಿನಲ್ಲಿ ಪ್ಲವೋತ್ಸವಾರಂಬ |
| 11 ಗುರುವಾರ | ತಿರುಮಲನಂಬಿ ವರ್ಷತಿರುನಕ್ಷತ್ರ |
| 12 ಶುಕ್ರವಾರ | ನಮ್ಮಾಳ್ವಾರ್ ಶಾತ್ತುಮೊರೆ |
| 13 ಶನಿವಾರ | ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ ಚಕ್ರಸ್ನಾನ |
| 14 ಬಾನುವಾರ | ತಿರುಚಾನೂರಿನಲ್ಲಿ ಪ್ಲವೋತ್ಸವ ಸಮಾಪ್ತಿ |
| 19 ಶುಕ್ರವಾರ | ಅಪ್ಪಲಾಯಗುಂಟ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವದಲ್ಲಿ ಚಕ್ರಸ್ನಾನ |
| 21 ಬಾನುವಾರ | ತಿರುಚಾನೂರು ಶ್ರೀ ಸುಂದರ ರಾಜಸ್ವಾಮಿ ಅವತಾರೋತ್ಸವಾರಂಬ |
| 23 ಮಂಗಳವಾರ | ತಿರುಚಾನೂರು ಶ್ರೀ ಸುಂದರ ರಾಜಸ್ವಾಮಿ ಅವತಾರೋತ್ಸವ ಸಮಾಪ್ತಿ |
| 30 ಮಂಗಳವಾರ | ಪರಿಯಾಳ್ವಾರ್ ಉತ್ಸವಾರಂಭ |

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

## ದರ್ಶನ ಹಾಗೂ ಸೇವಾ ವಿವಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ ೫ ೦೦ | ಪ್ರಾ ೫ ೩೦ |
| ವಿಶ್ವರೂಪ ಸರ್ವದರ್ಶನ* | ಪ್ರಾ ೫ ೩೦ | ಪ್ರಾ ೭ ೦೦ |
| ತೋಮಾಲ ಸೇವೆ | ಪ್ರಾ ೭ ೩೦ | ಪ್ರಾ ೮ ೦೦ |
| (ಆರ್ಜಿತ) ಅರ್ಚನೆ | ಪ್ರಾ ೮ ೦೦ | ಪ್ರಾ ೮ ೩೦ |
| (ಆರ್ಜಿತ) ಸರ್ವದರ್ಶನ | ಪ್ರಾ ೯ ೦೦ | ಮ ೧೨ ೩೦ |
| | ಮ ೧ ೦೦ | ಸಂ ೬ ೦೦ |
| | ರಾ ೭ ೦೦ | ರಾ ೮ ೪೫ |
| ಏಕಾಂತಸೇವೆ | | ರಾ ೯ ೦೦ಕ್ಕೆ |

* ಶುಕ್ರವಾರ ಏಕಾದಶಿ ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ ೫ ೩೦ ರಿಂದ ಪ್ರಾ ೬ ೩೦ ರ ವರೆಗೆ ಮಾತ್ರ

## ಆರ್ಜಿತ ಸೇವೆಗಳು

| | | |
|---|---|---|
| ೧ | ಗರುಡವಾಹನ | ೩೨ ೦೦ |
| ೨ | ಚಂದ್ರಪ್ರಭ ವಾಹನ | ೩೨ ೦೦ |
| ೩ | ಗಜವಾಹನ | ೩೨ ೦೦ |
| ೪ | ಅಶ್ವವಾಹನ | ೩೨ ೦೦ |
| ೫ | ಸಿಂಹವಾಹನ | ೩೨ ೦೦ |
| ೬ | ಹಂಸವಾಹನ | ೩೨ ೦೦ |
| ೭ | ಚಿಕ್ಕಶೇಷವಾಹನ | ೩೨ ೦೦ |
| ೮ | ದೊಡ್ಡ ಶೇಷವಾಹನ | ೬೨ ೦೦ |
| ೯ | ಸೂರ್ಯಪ್ರಭವಾಹನ | ೬೨ ೦೦ |

## ವಡಿಪ್ರಸಾದಗಳು

| | | |
|---|---|---|
| ೧ | ದೋಸೆ ಕಾಲಸೋಲ | ೩೫ ೦೦ |
| ೨ | ದಧ್ಯೋದನ | ೪೦ ೦೦ |
| ೩ | ಪುಳಿಯೋಗರೆ | ೫೦ ೦೦ |
| ೪ | ಪೊಂಗಲು | ೫೫ ೦೦ |
| ೫ | ಸಕ್ಕರೆಪೊಂಗಲ್ | ೬೫ ೦೦ |
| ೬ | ಶಾಕರ ಭಾತ್ | ೮೫ ೦೦ |
| ೭ | ಕೇಸರಿಭಾತ್ | ೯೦-೦೦ |
| ೮ | ಸೀರ | ೧೫೫ ೦೦ |

ವಿವರಗಳಿಗೆ
**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ

Edited and published on behalf of T T Devasthanams by K Subba Rao M A, and Printed at T T D Press by M Vijayakumar Reddy, Manager T T D Press, Tirupati 517 507

